# ಕನ್ನಡನುಡಿ

ಸಂಪುಟ ೧೫ ಸೆಪ್ಟೆಂಬರ್ ಸಂಚಿಕೆ ೯

ವಾರ್ಷಿಕ ಚಂದಾ : ಅಂಚೆ ವೆಚ್ಚ ಸೇರಿ ರೂ. ೬




---

ಸಂಪಾದಕರು :
ಎಂ. ಆರ್. ಶ್ರೀನಿವಾಸಮೂರ್ತಿಗಳು

---

ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು
೧೯೫೨

# ವಿಷಯಸೂಚಿಕೆ



---

ಮೈಸೂರು ವಿದ್ಯಾಖಾತೆಯವರಿಂದ ಟಿ. ಬಿ. ಸಿ. 15/50-51 (ತಾ|| 24-11-50) ನಿರೂಪದ ಪ್ರಕಾರ 'ಕನ್ನಡ ನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈಯ್ನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ. ರೂರಲ್ ಡೆವಲಪ್‌ಮೆಂಟ್ ಕಮಿಷನರ್ ಅವರ ನಂ.ಆರ್.ಡಿ.ಆರ್. 7, ಸಿ.2915/50-51 ನೆಯ ಪ್ರಕಾರ "ಕನ್ನಡ ನುಡಿ" ಸಂಸ್ಥಾನದ ಎಲ್ಲಾ ಗ್ರಾಮಪಂಚಾಯಿತಿಗಳಿಗೂ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.




ಸಂಪುಟ ೧೫ | ಸೆಪ್ಟೆಂಬರ್ ೧೯೫೨ | ಸಂಚಿಕೆ ೯

# ಪ್ರಾರ್ಥನೆ

ರಾಗ : ಕಾಂಭೋಧಿ. ತಾಳ : ಅಟತಾಳ




ಅನ್ನಪೂರ್ಣೆ ಕೃಪಾಪೂರ್ಣಹೃದಯೆ
ಸದಾ ಪೂರ್ಣೇಂದುವದನೆ ಪಾಹಿ ॥ ಪ ॥

ಕರ್ಣಾಂತ ವಿಶ್ರಾಂತ ಕನಕ ಕಮಲಸುವರ್ಣೆ
ಕರುಣಾ ಕಟಾಕ್ಷಜಾಲೆ ದೇವಿ ॥ ಅ ಪ ॥

ಕರಕಲಿತ ಶುಕಪೋತ ಕಿಲಕಿಲಾಯಿತ
ವಚೋಮೃತ ಲಾಲನೈಕ ನಿರತೆ ।
ಪರಿಲಸಿತ ವೀಣಾರವೋತ್ಕಲಿತ
ಸರಸ ಗೀತರಸಾಸ್ವಾದನಿರತೆ ।
ಥೈಯ್ಯಥೈಯ ವಿಜಿತತಾಳ ತಂತ್ರೀ
ಲಯಾಕಲಿತ ಲಲಿತ ಲಾಸ್ಯವಿಲಸಿತೆ-ಲಲಿತೆ ॥೧॥

ಕುಂದಕೋರಕಬೃಂದ ನಿಂದನೋದ್ಯತ
ದರಸ್ಪಂದ ಮಂದಸ್ಮಿತಕಲೆ ।
ಬೃಂದಾರಕೇಂದ್ರ ವರಸುಂದರೀಕಚಮಿ-
ಳಿಂದಾನಂದಿತಾಂಘ್ರಿಯುಗಳೇ ।
ವಂದಾರುಜನನಿಕರ ಮಂದಾರತರುತಲೆ
ಸಂದಾನಿತಾಮಲಕಲೆ ವಿಮಲೆ ॥೨॥

ದೇವಿ ಪಾವನ ಚರಿತಸಹ್ಯಜಾತಾಕಲಿತ
ತೀರವಾಸ ವಿನೋದಿತೆ,
ಭಾವಿತಾತ್ಮ ಸಮಸ್ತದಾಯಿನೀ ಮಹಾ
ದೇವಪುರನಿವಾಸ ನಿರತೆ,
ಸೇವಕೋತ್ತಮ ಮಹಾದೇವ ಕವಿ ಸನ್ನುತೆ,
ರಾಮಪ್ರಭು ಪ್ರಾರ್ಥಿತೆ-ವಿಹಿತೆ ॥೩॥

—ಶ್ರೀ ಮಹಾದೇವಕವಿ

## ಸುಭಾಷಿತ

ಪೋತೋ ದುಸ್ತರ ವಾರಿರಾಶಿತರಣೇ ದೀಪೋಽಂಧಕಾರಾಗಮೇ
ನಿರ್ವಾತೇ ವ್ಯಜನಂ ಮದಾಂಧಕರಿಣಾಂ ದರ್ಪೋಪಶಾಂತ್ಯೈ ಸೃಣಿಃ ।
ಇತ್ಥಂ ತದ್ಭುವಿ ನಾಸ್ತಿ ಯಸ್ಯ ವಿಧಿನಾ ನೋಪಾಯ ಚಿಂತಾ ಕೃತಾ
ಮನ್ಯೇ ದುರ್ಜನಚಿತ್ತವೃತ್ತಿಹರಣೇ ಧಾತಾಪಿ ಭಗ್ನೋದ್ಯಮಃ ॥

ದಾಟಲಸದಳವಾದ ಕಡಲನ್ನು ದಾಟಲು ನಾವೆ, ಕತ್ತಲೆಯ ಹಾವಳಿಯನ್ನು ತಪ್ಪಿಸಿಕೊಳ್ಳಲು ದೀಪ, ಗಾಳಿಯಿಲ್ಲದೆಡೆ ಬೀಸಣಿಗೆ, ಮದದಿಂದ ಕಣ್ಗಾಣದ ಆನೆಗಳ ಕೊಬ್ಬನ್ನು ಅಡಗಿಸಲು ಅಂಕುಶ– ಇವು ಸಾಧನಗಳು. ಹೀಗೆ ಆ ಸೃಷ್ಟಿಕರ್ತನಾದ ಬ್ರಹ್ಮ ಲೋಕದಲ್ಲಿ ಎಲ್ಲ ತೊಂದರೆಗಳನ್ನೂ ಪರಿಹರಿಸಿಕೊಳ್ಳಲು ಒಂದೊಂದು ಸಾಧನೆಯನ್ನು ಕಲ್ಪಿಸಿಕೊಟ್ಟಿದ್ದಾನೆ. ಆದರೆ ದುರ್ಜನರ ದೌರ್ಜನ್ಯವನ್ನು ಪರಿಹರಿಸುವ ವಿಷಯದಲ್ಲಿ ಸಾಧನ ಕಲ್ಪಿಸಲು ಸಾಹಸಪಟ್ಟು ಕೈಲಾಗದೆ ಭಗ್ನಮನೋರಥನಾದನೆಂದು ಭಾವಿಸುತ್ತೇನೆ.

ದುಜನರ ದೌರ್ಜನ್ಯವನ್ನು ಪರಿಹರಿಸುವ ಸಾಧನ ಇಲ್ಲವೇ ಇಲ್ಲ.

---

## ಹಾಡು

ಹಾಡುಕಟ್ಟುವನವನು ನಾಡು ಕಟ್ಟುವನಲಾ ?
ಹಾಡಿನೊಳಡಗಿಹುದು ಮಂತ್ರಶಕ್ತಿ !
ನಾಡ ನಾಳಿನ ಬದುಕು ಹಾಡಿನಲಿ ಮೂಡಿಬರೆ
ಹಾಡಿನಿಂದಾಗದೇ ಜನದ ಮುಕ್ತಿ ?

ಆ ಪುರಂದರ ಕನಕ ಸರ್ವಜ್ಞರೀ ಮೊದಲ್
ಹಾಡಿನೊಳಡಗಿರೆ ಕನ್ನಡದ ತಿರುಳ?
ಆ ಪರಿಯಲಿನ್ನೊಮ್ಮೆ ಮತ್ತೊಮ್ಮೆ ಮಗುದೊಮ್ಮೆ
ಹಾಡುವೆವೆ, ಮಿಡಿಯುವೆವೆ ಕನ್ನಡದ ಕರುಳ?

ದೇವನನು ಪೂಜಿಸಲು ಹಾಡು ಹೂವಿನ ಹಾರ,
ನಾಡನೆಚ್ಚರಿಸಲ್ಕೆ ಕಹಳೆ ಕೂಗು ;
ಭಾವುಕರ ರಂಜಿಸಲು ಭಾರತಿಯ ಕೈವೀಣೆ,
ಜನಮನಮುಸೆಯೆ ಮೇಲಾದ ಸಾಣೆ.

ಬಂಕಿಮರ ಹಾಡೊಂದು ಭಾರತೀಯರಿಗಾಯ್ತು
ಬಿಡುಗಡೆಯ ಬವರಕ್ಕೆ ತೂರ್ಯಸ್ವನ ;
ಶಂಕೆಯೇತಕ್ಕಯ್ಯ ? ಹಾಡಯ್ಯ ಹಾಡು ಕವಿ :
ಇಂದಲ್ಲ ನಾಳೆ ಸೆರೆ ನಾಡಿನ ಮನ.

—ರಾಘವ




# ಸಾಹಿತ್ಯ-ಸಂಶೋಧನ

## ಚಾರಿತ್ರಕ ಆವರಣ

ಶ್ರೀ ದೇಸಾಯಿ ಪಾಂಡುರಂಗರಾಯರು, ಎಂ.ಎ., ನೀಲಗಿರಿ

ಸಾಹಿತ್ಯ ಮತ್ತು ಭಾಷೆ ಚರಿತ್ರೆಯೊಂದಿಗೆ ನಿಕಟ ಸಂಬಂಧವುಳ್ಳವಾಗಿವೆ. ಈ ಸಂಗತಿ ಸಕೃದ್ ದರ್ಶನಕ್ಕೆ ಅಷ್ಟು ಸ್ಪುಟವಾಗಿ ಗೋಚರವಾಗಲಿಕ್ಕಿಲ್ಲ. ಆದರೆ ಹೆಚ್ಚು ವಿಚಾರ ಮಾಡಿದರೆ ಇದರ ಸತ್ಯತೆ ಪ್ರತೀತಿಗೆ ಬರುತ್ತದೆ. ನಮ್ಮ ಸಾಹಿತ್ಯ ಮತ್ತು ಭಾಷೆ ಸಾವಿರಾರು ವರ್ಷಗಳಿಂದ ನಮ್ಮ ಜೀವನ ಸಹಚರಗಳಾಗಿ ಬೆಳೆದು ಬಂದಿವೆ. ಅವುಗಳ ಮೇಲೆ ಬಗೆ ಬಗೆಯಾಗಿ ಬಾಳಿದ ನಮ್ಮ ಜನಾಂಗಜೀವನದ ವಿವಿಧ ಸಂಸ್ಕಾರಗಳು ಮೂಡಿ ನಿಂತಿವೆ. ನಾವಾಡುವ ಒಂದೊಂದು ಮಾತನ್ನು ಇಲ್ಲವೆ ನಾವು ಮೆಚ್ಚುವ ಒಂದೊಂದು ಸಾಹಿತ್ಯಕೃತಿಯನ್ನು ಉಚಿತವಾದ ಚಾರಿತ್ರಕ ಆವರಣದಲ್ಲಿ ಪರಿಶೀಲಿಸಿದರೆ ಮಾತ್ರ ಅವುಗಳ ಸಮರ್ಪಕ ಅಭಿಪ್ರಾಯವು ಅವಗತವಾಗುವುದು. ನಮ್ಮ ಸಾಹಿತ್ಯ ಮತ್ತು ಭಾಷೆಗಳ ಸ್ಥಿತಿಗತಿಗಳನ್ನು ಯಥಾರ್ಥವಾಗಿ ಅರಿತುಕೊಳ್ಳಲು ಅವುಗಳ ಚಾರಿತ್ರಕ ವ್ಯಾಸಂಗವು ಶಾಸ್ತ್ರಶುದ್ಧವಾಗಿ ನಡೆಯುವ ಅಗತ್ಯವಿದೆ.

ಚಾರಿತ್ರಕ ಆವರಣವು ವಾಙ್ಮಯದಲ್ಲಿ ಹೇಗೆ ಹಾಸುಹೊಕ್ಕಾಗಿ ನಿಲ್ಲುತ್ತದೆ. ಎಂಬುದನ್ನು ತಿಳಿಯಾಗಿಸಲು ಇಂದು ನಾವು ರೂಢಿಸುತ್ತಿರುವ ಕೆಲವು ಶಬ್ದಗಳನ್ನು ಉದಾಹರಣೆಯಾಗಿ ಎತ್ತಿ ತೋರಿಸಬಹುದು. ಆ ಶಬ್ದಗಳು ಹೀಗೆ:— ರಾಷ್ಟ್ರೀಯ ಸಭೆ, ಸೇವಾದಲ, ಪ್ರಜಾಪ್ರಭುತ್ವ, ಏಕೀಕರಣ, ಅಂತರ್ ರಾಷ್ಟ್ರೀಯ, ಮತಾಧಿಕಾರ, ಪಾನನಿರೋಧ, ಅಲ್ಪ ಸಂಖ್ಯಾತ, ನಡುಗಾಲ ಆಡಳಿತ, ವಯಸ್ಕರ ಶಿಕ್ಷಣ, ಸಾಕ್ಷರತಾ ಪ್ರಚಾರ, ಸಂಸ್ಕೃತಿ, ವೈಜ್ಞಾನಿಕ, ಸ್ಥಾನಿಕ ಸ್ವರಾಜ್ಯ, ನಗರಪಾಲಿಕೆ, ಅಣುಗುಂಡು, ಅತಿ ಪ್ರಸರಣ, ವನಮಹೋತ್ಸವ, ಇತ್ಯಾದಿ. ಈ ಒಂದೊಂದು ಮಾತಿಗೂ ವಿಶಿಷ್ಟ ಅಭಿಪ್ರಾಯವು ಪ್ರಸ್ತುತ ಚಾರಿತ್ರಕ ಪರಿಸ್ಥಿತಿಯ ಮೂಲಕ ಉಂಟಾಗಿದೆ. ಈ ವಿಷಯವನ್ನು ವಿವರಿಸುವ ಅಗತ್ಯವಿಲ್ಲ. ಹದಿನೆಂಟನೆಯ ಶತಮಾನದ ಮೇಧಾವಿಯೊಬ್ಬನು. ನಮ್ಮ ಮುಂದೆ ನಿಂತಿರುವನೆಂದು ಕ್ಷಣಹೊತ್ತು ಕಲ್ಪಿಸಿ ಆತನೊಡನೆ ಇಂತಹ ಭಾಷೆಯನ್ನು ನಾವು ಬಳಸುವುದಾದರೆ ಅದು ಎಷ್ಟರಮಟ್ಟಿಗೆ ಆತನಿಗೆ ಅರ್ಥವಾದೀತು ಎಂಬುದನ್ನು ಊಹಿಸಿಕೊಂಡರೆ ಸಾಕು. ಈ ಶಬ್ದಗಳ ಸರಿಯಾದ ಅರ್ಥವನ್ನು ಆತನಿಗೆ ತಿಳಿಸಬೇಕೆಂದು ನಿರ್ಧಾರ ಮಾಡಿದರೆ ಎಷ್ಟು ವಿಧದಿಂದ ಅವುಗಳ ಚಾರಿತ್ರಕ ಹಿನ್ನೆಲೆಯನ್ನು ನಾವು ಆತನಿಗೆ ನಿರೂಪಿಸಬೇಕಾದೀತು ಎಂಬುದನ್ನು ಗುಣಿಸಿ ನೋಡಬಹುದು.

ನಮ್ಮ ಸಾಹಿತ್ಯ ಮತ್ತು ಭಾಷೆಯ ಶಾಸ್ತ್ರೀಯ ಅಭ್ಯಾಸದಲ್ಲಿ ಹೆಚ್ಚಿನ ಸಹಾಯವನ್ನು ನೀಡಬಲ್ಲ ಅಮೂಲ್ಯ ನಿಧಿಯೊಂದು ನಮಗೆ ಲಭ್ಯವಿದೆ. ಅದು ಕನ್ನಡ ಶಾಸನಗಳು. ನಮ್ಮ ಭಾಷೆಯ ಅಭ್ಯಾಸದಲ್ಲಿ ಶಾಸನಗಳು ಹೇಗೆ ಉಪಕಾರಕವಾಗುತ್ತವೆ ಎಂಬ ವಿಷಯವು ಇದೀಗ ನಾನು ಈ ಪತ್ರಿಕೆಯಲ್ಲಿ ಆಗಾಗ ಚರ್ಚಿಸುತ್ತಿರುವ 'ಭಾಷಾವಿಹಾರ' ಎಂಬ ಲೇಖನ ಮಾಲೆಯಿಂದ ಕೆಲಮಟ್ಟಿಗೆ ಸ್ಫುಟವಾಗಬಹುದು. ಈ ಸಂದರ್ಭದಲ್ಲಿ ಮಹಾನಾಡು, ಒಲ್ಲಣಿಗೆ, ಸಾನಿ, ಮುಂತಾದ ಚರ್ಚೆಗಳನ್ನು ನೋಡಬಹುದು. ಇದೇ ಪರಿಯಲ್ಲಿ ಶಾಸನಗಳ ನೆರವಿನಲ್ಲಿ ನಮ್ಮ ಸಾಹಿತ್ಯಕೃತಿಗಳನ್ನು ಪರಿಶೀಲಿಸಿದರೆ ನಮಗೆ ಅನೇಕ ಕಡೆಯಲ್ಲಿ ನಮಗೆ ಆಳವಾದ ಅರ್ಥಪುಷ್ಟಿಯೂ ಅಧಿಕವಾದ ಅಭಿಪ್ರಾಯ ಸೌಕ್ಷ್ಮವವೂ ದೊರೆಯುವಂತಿದೆ. ಈ ಬಗೆಯ ಅರ್ಥಪುಷ್ಟಿ ಮತ್ತು ಅಭಿಪ್ರಾಯ ಸೌಕ್ಷ್ಮವವನ್ನು ಪಡೆಯಲು ಶಾಸನಗಳ ವ್ಯಾಸಂಗವು ಹೇಗೆ ಆವಶ್ಯಕವಾಗಿದೆ ಎಂಬ ವಿಚಾರವನ್ನು ಪ್ರಸ್ತುತ ಲೇಖನದಲ್ಲಿ ಹಲವಾರು ಉದಾಹರಣೆಗಳ ಬಲದಿಂದ ಸ್ವಲ್ಪ ದೂರಕ್ಕೆ ಪ್ರತಿಪಾದಿಸಲೆಳಸುವೆ.

### ಪಂಪಭಾರತ

ಆದಿಪಂಪನು ತನ್ನ ಪೋಷಕನಾದ ಅರಿಕೇಸರಿಯನ್ನು ಪ್ರಶಂಸಿಸುತ್ತ ಒಂದು ಪದ್ಯದಲ್ಲಿ ಆತನ ಘನತೆಯನ್ನು ಸೂಚಿಸಿರುವನು. ಆ ಪದ್ಯವು ಹೀಗೆ:-

ಸಮನೆನಿಸುವರ್ ಪ್ರಶಸ್ತಿ –
ಕ್ರಮದೊಳ್ ಸ್ವಸ್ತಿ ಸಮಧಿಗತ ಪಂಚಮಹಾಶ –
ಬ್ದ ಮಹಾ ಸಾಮಂತರೆನಲ್
ಸಮನೆನೆಪರೆ ಗುಣದೊಳರಿಗನೊಳ್ ಸಾಮಂತರ್ ॥

ವಿಕ್ರಮಾರ್ಜುನ ವಿಜಯ, ೧-೪೯.

ರಾಜಕೀಯ ಕ್ಷೇತ್ರದಲ್ಲಿ ಅರಿಕೇಸರಿಯ ಪದವಿ ಒಬ್ಬ ಸಾಮಂತನದಾಗಿದ್ದರೂ ನಿಜದಲ್ಲಿ ಆತನ ಯೋಗ್ಯತೆ ಮಿಕ್ಕ ಸಾಮಂತರಿಗಿಂತ ಮಿಗಿಲಾಗಿದ್ದಿತು ಎಂಬುದು ಈ ಪದ್ಯದ ಭಾವ. ಈ ಭಾವದ ಗಾಂಭೀರ್ಯವು ಇಲ್ಲಿ ಪ್ರಯೋಗಿಸಿದ 'ಸ್ವಸ್ತಿ ಸಮಧಿಗತಪಂಚಮಹಾಶಬ್ದ' ಎಂಬೀ ಪದಗಳಿಂದ ಶೋಭಾಯಮಾನವಾಗಿದೆ. ಅದು ಹೇಗೆ ಎಂಬುದನ್ನು ಈ ಕಾಲದ ಶಾಸನವಾಙ್ಮಯದ ಪರಿಚಯವುಳ್ಳ ವಾಚಕನು ಯಥಾರ್ಥವಾಗಿ ಗ್ರಹಿಸಬಹುದು. ಈ ಕಾಲದ ಶಾಸನಗಳಲ್ಲಿ ಮೊದಲು ಆಳುವ ಅಧಿರಾಜರ ವಂಶಪ್ರಶಸ್ತಿ, ಬಿರುದು, ಮೊದಲಾದುವುಗಳನ್ನು ನಿರೂಪಿಸಿ ಅನಂತರ ಅರಸು, ಸಾಮಂತ, ಮೊದಲಾದವರನ್ನು ನಿರ್ದೇಶಿಸುವ ಪದ್ಧತಿ ಸಾಮಾನ್ಯವಾಗಿ ಕಂಡು ಬರುತ್ತದೆ. ಇಂತಹ ಅಧೀನ ಅಧಿಕಾರಿಗಳ ವರ್ಣನೆ 'ತತ್ಪಾದ ಪದ್ಮೋಪಜೀವಿ' ಎಂಬ ಪದದಿಂದ ಮೊದಲುಗೊಂಡು 'ಸ್ವಸ್ತಿ ಸಮಧಿಗತ–ಪಂಚಮಹಾಶಬ್ದ' ಎಂಬ ಉಕ್ತಿಯಿಂದ ಮುಂದುವರಿಯುತ್ತದೆ. ಈ ಕಾರಣದಿಂದ 'ಸಮಧಿಗತ ಪಂಚಮಹಾಶಬ್ದ' ಎಂಬ ಪದಗಳು ನಿರಂತರದಲ್ಲಿ ಸಾಮಂತ, ಮಹಾಸಾಮಂತ, ಮಹಾಮಂಡಲೇಶ್ವರಾದಿ ಅಂಕಿತ ನಾಯಕರುಗಳ ವಿಶಿಷ್ಟ ಪದವಿಯ ದ್ಯೋತಕವೆಂದು ವಾಙ್ಮಯದಲ್ಲಿ ರೂಢವಾಗಿದ್ದುವು. ಆ ಮೇರೆಗೆ ಅರಿಕೇಸರಿಯನ್ನು ಹೆಸರಿಸುವ ಸಂದರ್ಭದಲ್ಲಿಯಾದರೂ 'ಸಮಧಿಗತ ಪಂಚಮಹಾಶಬ್ದ' ಎಂಬ ಪದಗಳ ಪ್ರಯೋಗವನ್ನು ಕಾಣಬೇಕಾದುದು. ಹೀಗಿದ್ದರೂ ಈ ಪದಗಳು ಅರಿಕೇಸರಿಗೆ ಅನ್ವಯಿಸುತ್ತಿದ್ದುದು ಮಾತ್ರ ಔಪಚಾರಿಕವಾಗಿಯಲ್ಲದೆ ಪರಮಾರ್ಥದಲ್ಲಿ ಅಲ್ಲ, ಎಂಬುದು ಪಂಪನ ಪ್ರತಿಪಾದನೆ. ಈ ಅಭಿಪ್ರಾಯವು ಪೂರ್ತಿಯಾಗಿ ತಿಳಿಯ ಬೇಕಾದರೆ ಅಂದಿನ ಕಾಲದ ಶಾಸನ ವಾಙ್ಮಯದಲ್ಲಿ ಬಳಕೆಗೊಂಡಿರುವ ಅಧಿರಾಜ, ಅಧೀನರಾಜರೇ ಮೊದಲಾದವರ ಪ್ರಶಸ್ತಿಕ್ರಮದ ಯಥಾರ್ಥ ತಿಳಿವಳಿಕೆ ಇರುವುದು ಆವಶ್ಯಕ. ಇದಲ್ಲದೆ 'ಸಮಧಿಗತ ಪಂಚಮಹಾಶಬ್ದ' ಎಂಬಿಷ್ಟು ಪದಗಳು ಮಾತ್ರ ಸಾಕಾಗುತ್ತಿದ್ದರೂ ಅವುಗಳ ಜೊತೆಯಲ್ಲಿ ಶಾಸನ ಪಾಠಗಳಲ್ಲಿ ತಪ್ಪದೆ ಉಕ್ತವಾಗುವ 'ಸ್ವಸ್ತಿ' ಎಂಬ ಮಾತನ್ನು ಪಂಪನು ಪ್ರಯೋಗಿಸಿದುದು ಇನ್ನಿಷ್ಟು ಅರ್ಥಪೂರ್ಣವಾಗಿದೆ. ಇದರಿಂದ ಆ ಕಾಲದ ವಾಙ್ಮಯದ ಚಾರಿತ್ರಕ ಹಿನ್ನೆಲೆ ಮತ್ತಷ್ಟು ಸ್ಫುಟವಾಗುತ್ತದೆ.

ಮೇಲೆ ನಿರ್ದಿಷ್ಟವಾದ **ಪಂಚಮಹಾಶಬ್ದ** ಎಂಬ ಉಕ್ತಿಯಿಂದ ಕೊಂಬು. ತಮ್ಮಟೆ, ಶಂಖ, ಭೇರಿ ಮತ್ತು ಜಯಗಂಟೆ, ಈ ಐದು ವಾದ್ಯಗಳು ಸೂಚಿತವಾಗುತ್ತವೆ.[೧] ಈ ವಾದ್ಯಗಳ ಮೂಲಕ ತನ್ನ ವಿಶಿಷ್ಟ ಪ್ರಶಸ್ತಿಯನ್ನು ಪ್ರದರ್ಶಿಸುವ ಅಧಿಕಾರವನ್ನು ಪಡೆದ ನಾಯಕನಿಗೆ 'ಸಮಧಿಗತ ಪಂಚಮಹಾಶಬ್ದ' ಎನ್ನುತ್ತಿದ್ದರು. ಇಂತಹ ಅಧಿಕಾರವನ್ನು ಪಡೆಯಬೇಕಾದರೆ ತಕ್ಕ ಅರ್ಹತೆಯನ್ನು ಸ್ಥಾಪನ ಮಾಡಬೇಕಾಗುತ್ತಿದ್ದಿತು.

## ಬಸವೇಶ್ವರ ವಚನಗಳು

ಇನ್ನು ಬಸವೇಶ್ವರ ವಚನಗಳಲ್ಲಿ ಹಣಿಯಿಕ್ಕಿ ನೋಡುವ. ಈ ವಚನಗಳಲ್ಲಿಯೂ **ಪಂಚಮಹಾಶಬ್ದ** ಎಂಬೀ ಮಾತು ಮೇಲೆ ವಿವರಿಸಿದ ಚಾರಿತ್ರಕ ಹಿನ್ನೆಲೆಯಲ್ಲಿ, ಆದರೂ ಬೇರೊಂದು ಸಂದರ್ಭದಲ್ಲಿ ತಲೆದೋರುತ್ತದೆ. ಅದು ಹೀಗೆ:

ಇರುಳೆಂದೇನೋ ಕುರುಡಂಗೆ? ಹಗಲೆಂದೇನೋ ಕುರುಡಂಗೆ? ತಾಳ ಬಾರಿಸಿದರೇನಯ್ಯ? **ಪಂಚಮಹಾಶಬುದವ** ಬಾರಿಸಿದರೇನೋ ಕಿವುಡಂಗೆ, ಕೂಡಲ ಸಂಗಮ ದೇವಯ್ಯನ ಪಥವಿನ್ನಾವುದೆಂದರಿಯದವಂಗೆ?

ಇದಲ್ಲದೆ **ಅಂಕ, ಅಂಕಕಾರ, ಲೆಂಕ,** ಮೊದಲಾದ ಪದಗಳು ಬಸವೇಶ್ವರ ವಚನಗಳಲ್ಲಿ ದೊರೆಯುತ್ತವೆ. ಅವುಗಳಿಗೆ ಶೂರ, ವೀರ, ಮುಂತಾಗಿ ಸಾಮಾನ್ಯ ಅರ್ಥವನ್ನು ಹೇಳುವುದು ಸರಿಯಾಗಲಾರದು. ಈ ಪದಗಳಿಗಾದರೂ ವಿಶಿಷ್ಟ ಚಾರಿತ್ರಕ ಹಿನ್ನೆಲೆಯಿದ್ದು, ತತ್ಕಾಲೀನ ಭಾಷೆಯಲ್ಲಿ ರೂಢವಾಗಿದ್ದ ಸಾಂಕೇತಿಕ ಅಭಿಪ್ರಾಯವು ಒಳಗೊಂಡಿದೆ. ಮೊದಲು **ಅಂಕಕಾರ** ಎಂಬ ಶಬ್ದವನ್ನು ಎತ್ತಿಕೊಳ್ಳುವ. ತನ್ನ ಒಡೆಯನೊಡನೆ ಒಂದು ವಿಶಿಷ್ಟ ಪ್ರತಿಜ್ಞೆಯಿಂದ ಬದ್ಧನಾಗಿ ನಿರಂತರ ದಕ್ಷತೆಯಿಂದ ಕಳದಲ್ಲಿ ಅಂಜದೆ ಹಿಂಜರಿಯದೆ ಆಜನ್ಮ ಸೇವೆಯನ್ನು ಸಲ್ಲಿಸುವ

---

೧ Indian Antiquary, Vol. XII, p. 96.

ಯೋಧನಿಗೆ **ಅಂಕಕಾರ** ಎಂಬ ಹೆಸರು ಇದ್ದಿತು. ಅಂಕಕಾರ ಎಂಬುದರ ಸಂಕ್ಷಿಪ್ತರೂಪು **ಅಂಕ**. **ಅಂಕ** ಎಂಬುದಕ್ಕೆ ಇಂತಹ ಯೋಧನ ವಿಶಿಷ್ಟ ಪ್ರತಿಜ್ಞೆ ಎಂದೂ ಅರ್ಥವಾಗುತ್ತದೆ. ಈ ಅರ್ಥಗಳಲ್ಲಿ ಅಂಕ ಮತ್ತು ಅಂಕಕಾರ ಎಂಬ ಮಾತುಗಳು ಬಸವೇಶ್ವರ ವಚನಗಳಲ್ಲಿ ಕಾಣಿಸಿಕೊಳ್ಳುತ್ತವೆ. ಪರಿಶೀಲನ ಸೌಲಭ್ಯಕ್ಕಾಗಿ ಆ ವಚನಗಳನ್ನು ಇಲ್ಲಿ ಉದಾಹರಿಸುವೆ.

೧. **ಅಂಕ** ಕಳನೇರಿ ಕೈಮರೆದಿರ್ದಡೆ, ಮಾರಾಂತ ಬಂದಿರುವುದ ಮಾಬನೆ? ನಿಮ್ಮ ನೆನೆವ ಮತಿ ಮರೆದಿರ್ದರೆ, ಪಾಪ ತನುವನ ನಂಡಲೆವುದೆ ಮಾಬುದೆ? ಕೂಡಲಸಂಗಯ್ಯನ ನೆನೆದರೆ, ಪಾಪ ಉರಿಗೊಡ್ಡಿದರಗಿನಂತೆ ಕರಗುವುದಯ್ಯಾ.. ೨

೨. **ಅಂಕ** ಓಡಿದರೆ ತೆತ್ತಿಗಂಗೆ ಭಂಗವಯ್ಯಾ. ಕಾದಿಗೆಲಿಸಯ್ಯಾ ಎನ್ನನು, ಕಾದಿ ಗೆಲಸಯ್ಯಾ! ಕೂಡಲಸಂಗಮದೇವಯ್ಯ, ಎನ್ನ ತನು ಮನ ಧನದಲ್ಲಿ ವಂಚನೆ ಇಲ್ಲದೆ. ೩

೩. ಆಲುತ್ತಲು ಹರಿಯ ಹೊಯಿಸಿ ಅಂಕವ ಮಾಡಿದೆನೆಲ್ಲರ ಕಂಡು. ಆನು ಬೇಡೆಂದಡೆ ಮಾಣೆ. ಕಲಿತನವ ಮಾಡಿದೆನೆಲ್ಲರ ಕಂಡು. ಅಲ್ಲಿ ಹೋಯಿತ್ತಾಗಳೆ ಎಂದಡೆ ಆಶೆಮಾಡೆನು, ಕೂಡಲ ಸಂಗಮದೇವಾ. ೪

೪. ಕರ್ಮವೆಂಬ ಅಂಕದೊಡನೆ ತೊಡರಿದೆ. ಬಿನ್ನಪವ ಅವಧಾರು ನಿಮ್ಮಾಳಿನ ಭಾಷೆಯ. ಕಡೆಗಳಕ್ಕೆ ನೂಂಕುವೆ; ಕೆಡಹುವೆನಂಕವ. ಕರೆದೊಡೋಸರಿಸಿದರೆ ನಿಮ್ಮಾಳಲ್ಲ; ಶಿವಶರಣೆಂಬ ದಂಡೆಯ ಹೂಡಿ ಗಣ ಮೇಳಾಪವೆಂಬ ಅಲಗಿನಿಂದಿರಿವೆ, ಕೂಡಲಸಂಗಮದೇವ. ೫

೫. ಕಟ್ಟಿದೆನೊರೆಯ ಬಿಟ್ಟು ಜನ್ನಿಗೆಯರ. ಮುಟ್ಟಿ ಬಂದಿರಿದರೆ ಓಸರಿಸುವನಲ್ಲಿ. ಓಡದಿರು ಓಡದಿರು. ನಿಮ್ಮ ಶರಣರ ಮನೆಯ ಬಿರುದಿನ **ಅಂಕಕಾರ**. ಓಡದಿರು, ಓಡದಿರು; ಎಲೆ ಎಲೆ ದೇವಾ, ಎಲೆ ಎಲೆ ಸ್ವಾಮಿ; ಎಲೆ ಎಲೆಹಂಡೆ, ಕೂಡಲ ಸಂಗಮದೇವಾ. ೬

ಇಂತಹ ಅಂಕಕಾರನ ಒಡಯನಿಗೆ **ತೆತ್ತಿಗ** ಎನ್ನುತ್ತಿದ್ದರೆಂಬ ಅಂಶವು ಮೇಲೆ ಉದಾಹರಿಸಿದ ೨ನೆಯ ಅಂಕದ ವಚನದಿಂದ ತಿಳಿಯುತ್ತದೆ. ಅಂಕಕಾರನು ತನ್ನ ಉಗ್ರ ಸೇವೆಯ ವೀರ ಪ್ರತಿಜ್ಞೆಯನ್ನು ಸಾರ್ವಜನಿಕವಾಗಿ ಸಾರಿ ಮಾಡುತ್ತಿದ್ದನೆಂಬ ಸಂಗತಿ ಮೇಲಿನ ೩ನೆಯ ಅಂಕದ ವಚನದಿಂದ ಪ್ರಕಟವಾಗುತ್ತದೆ. ಅಂಕಕಾರನ ಪ್ರತಿಜ್ಞೆ ಎಷ್ಟರ ಮಟ್ಟಿಗೆ ಹೊಣೆಗಾರಿಕೆಯದು ಮತ್ತು ಬಂಧನಕಾರಕವಾಗಿದ್ದಿತು ಎಂಬ ವಿಷಯ ಮೇಲಿನ ೪ನೆಯ ಅಂಕದ ವಚನದಿಂದ ಪ್ರತೀತಿಗೆ ಬರುತ್ತದೆ

ಈ ಸಂದರ್ಭದಲ್ಲಿ ಶಾಸನದಲ್ಲಿಯ ಒಂದು ಉದಾಹರಣೆಯನ್ನು ಲಕ್ಷಿಸಬಹುದು. ಧಾರವಾಡ ಜಿಲ್ಲೆಯ ಮುಂಡರಗಿ ಪೇಠದ ಕಕ್ಕೂರು ಗ್ರಾಮದ ಒಂದು ಶಾಸನದಲ್ಲಿ[೭] ಮಾಸವಾಡಿ ಪ್ರದೇಶವನ್ನು ಆಳುತ್ತಿದ್ದ ಯಾದವ ವಂಶದ ಪೆರ್ಮಾಡಿಯರಸನೆಂಬ ಮಹಾಮಂಡಲೇಶ್ವರನ ನಿರ್ದೇಶವು ಬರುತ್ತದೆ. ಈ ಪೆರ್ಮಾಡಿಯರಸನು ಮಾರ್ತಂಡದೇವನ **ಅಂಕಕಾರ**ನಾಗಿದ್ದನೆಂದು ಶಾಸನದಲ್ಲಿ ಹೇಳಿದೆ. ಇದರಿಂದ ಅಂಕಕಾರನೆಂಬುದು ಗೌರವದ ಸೇವೆಯಾಗಿದ್ದು ಉನ್ನತ ಪದವಿಯಲ್ಲಿದ್ದವರಾದರೂ ಇದನ್ನು ಪಡೆಯುತ್ತಿದ್ದರೆಂದು ವ್ಯಕ್ತವಾಗುತ್ತದೆ.

ಇನ್ನು **ಲೆಂಕ** ಶಬ್ದದ ವಿಚಾರ. ಲೆಂಕ ಎಂಬ ಮಾತನ್ನು ಬಳಸಿಕೊಂಡ ಬಸವೇಶ್ವರವಚನಗಳೆರಡನ್ನು ಅವಲೋಕಿಸುವ. ಅವು ಹೀಗೆ:—

೧. ಓಡುವಾತ ಲೆಂಕನಲ್ಲ; ಬೇಡುವಾತ ಭಕ್ತನಲ್ಲ. ಓಡಲಾಗದು ಲೆಂಕನು; ಬೇಡಲಾಗದು ಭಕ್ತನು. ಓಡೆನಯ್ಯಾ, ಬೇಡೆನಯಾ ಕೂಡಲ ಸಂಗಮದೇವಾ. ೮

೨. ಅಂಕ ಕಂಡ ಕೋಲಾಸೆ ಮತ್ತೇಕಯ್ಯಾ? ಲೆಂಕ ಕಂಡ ಪ್ರಾಣದಾಸೆ ಮತ್ತೇಕಯ್ಯಾ? ಭಕ್ತ ಕಂಡ ತನು ಮನ ಧನದಾಸೆ ಮತ್ತೇಕಯ್ಯಾ? ನಿಮ್ಮಂಕೆಗೆ ಝುಂಕೆಗೆ ಶಂಕಿತನಾದರೆ ಎನ ಲೆಂಕತನಕೆ ಹಾನಿ ಕೂಡಲ ಸಂಗಮದೇವ. ೯

ಈ ವಚನಗಳಿಂದ ಲೆಂಕನಾದವನು ಯುದ್ಧದಲ್ಲಿ ಪರಾಙ್ಮುಖನಾಗದೆ ನಿಷ್ಠೆಯಿಂದ ಕೊನೆಯವರೆಗೆ ಹೋರಾಡುವ ವೀರನೆಂಬ ಅಭಿಪ್ರಾಯವು ಉಂಟಾಗುತ್ತದೆ. ಆದರೆ ಈ ವಿಚಾರದಲ್ಲಿ ಹೆಚ್ಚಿನ ತಿಳಿವಳಿಕೆಗಾಗಿ

೨ ಫ. ಗು. ಹಳಕಟ್ಟಿ; ಬಸವೇಶ್ವರನ ವಚನಗಳು, ೧೯೩೦; ಪುಟ ೨೭, ವಚನ ೬೫.
೩ ಅದೇ, ಪು. ೪೫, ವ. ೫೦.
೪ ಅದೇ, ಪು. ೬೫, ವ. ೭.
೫ ಅದೇ, ಪು. ೧೦೬, ವ. [illegible].
೬ ಅದೇ, ಪು. ೧೦೬, ವ. ೧೦.

೭ Bombay-Karnatak Inscriptions. Vol. I, pt. II, No. 165.
೮ ಬಸವೇಶ್ವರನ ವಚನಗಳು (ಅದೇ), ಪು. ೬೬, ವ. ೧೨.
೯ ಅದೇ, ಪು. ೧೧೧, ವ. ೧.

ನಾವು ಶಾಸನಗಳ ಸಹಾಯವನ್ನು ಪಡೆಯುವುದು ಲೇಸು. ಬಳ್ಳಾರಿ ಜಿಲ್ಲೆಯ ಹಡಗಲ್ಲಿ ತಾಲೂಕಿನ ಮೋರಿಗೇರಿ ಗ್ರಾಮದ ಒಂದು ಶಾಸನದಲ್ಲಿ[೧೦] ಲೆಂಕರ ವೈಶಿಷ್ಟ್ಯವನ್ನು ಹೀಗೆ ವರ್ಣಿಸಿದೆ.

> ನುಡಿವುದು ನನ್ನಿ ಮಾಡುವುದು ಕೀರ್ತನ ಮೀವುದೆ ಸದ್ವಿನೋದ ಮೊ-
> ಯ್ಕನೆ ಮಜ಼ಿಪೊಕ್ಕ ಬನ್ನೆ ಱಿಯೆ ಕಾವ ಗುಣಂ ಬೆಸನಂ ಮಹಾಜಿಯೊಳ್
> ಸೆಡೆಯದೆ ದುಗ್ಗಿಯೆಂದು ನುಡಿವೀನುಡಿ ಲೆಂಕರೊಳಾವ ಕಾಲಮುಂ
> ನಡೆವುದು ಪಣ್ಡಿತರ್ ಪೊಗಳೆ ಭೇರಿಯ ಗೋಸನೆ ಭೂತಳಾಗ್ರದೊಳ್ ||

ಇದೇ ಶಾಸನದಲ್ಲಿ ಮುಂದೆ ಇಂತಹ ಸಾವಿರ **ಲೆಂಕರ** ಒಂದು ಸಂಘದವರು ಕೆಲವು ಗ್ರಾಮಗಳನ್ನು ಆಳುತ್ತಿದ್ದಂತೆಯೂ ಲೆಂಕೇಶ್ವರ ಮೊದಲಾದ ದೇವರಿಗೆ ದತ್ತಿಯನ್ನು ಬಿಟ್ಟಂತೆಯೂ ನಿರೂಪಿಸಿದೆ. ಈ ಶಾಸನ ಕಾಲ ಕ್ರಿ. ವ. ೧೦೫೫. ಬೆಳಗಾವ ಜಿಲ್ಲೆಯ ಪರಸಗಡ (ಎಂದರೆ ಸವದತ್ತಿ) ತಾಲೂಕಿನ ಆರ್ತಗಲ್ ಗ್ರಾಮದ ಸು. ೧೧೫೯ನೆಯ ಕ್ರಿ. ವ. ದ ಒಂದು ಶಾಸನದಲ್ಲಿ[೧೧] ಚಾಲುಕ್ಯ ಅರಸನ ವಿಕ್ರಮಾದಿತ್ಯನ ಅಂಗರಕ್ಷಕ ತುಳುವ ದಳದ ಮುಖ್ಯಸ್ಥನಾದ ಮಹಾಸಾಮಂತ ಚಿಕ್ಕರಸನ ಮಗ ದೇವತಿ ಸ್ವರ್ಗಸ್ಥನಾಗಲು ಆತನ **ಲೆಂಕ** ನರಸುಗ ಎಂಬವನು ಅಗ್ನಿಪ್ರವೇಶ ಮಾಡಿದನೆಂದು ವರ್ಣಿಸಿದೆ. ಈ ಮೊದಲಾದ ಆಧಾರಗಳಿಂದ ಲೆಂಕ ಎಂಬ ವಿಶಿಷ್ಟ ವೀರವರ್ಗದ ಬಗೆಗೆ ನಮಗೆ ಹೆಚ್ಚು ನಿಶ್ಚಿತವಾದ ಜ್ಞಾನವು ಉಂಟಾಗುತ್ತದೆ.

ಮಗದೊಂದು ಬಸವೇಶ್ವರ ವಚನವು ಹೀಗಿದೆ.

> ಕೊಡೆವಿಡಿಯೆ ಕುದುರೆಯ ದೃಢವುಳ್ಳ ರಾವುತನೇರಿ ಕೊಡೆ–ಕೋಟಿ ಶೂರರು ಹನ್ನಿಬ್ಬರವ್ವಾ ! ಚಂದ್ರಕಾಂತದ ಗಿರಿಯ ಒಂದು ಗಜ ಮೂದಲಿಸಿ ಅರಿದು ಕೊಲ್ಲುವರೆ, ರಿಪುಗಳ ಕಲಿತನವ ನೋಡಾ. ಅವಗೆಯಲೊದವಿದ ಪುತ್ಥಳಿಯ ರೂಹಿನಂತೆ ಆಯಿತ್ತು ಕೂಡಲಸಂಗಮದೇವಾ, ನಿಮ್ಮ ಹೆಸರಿಲ್ಲದ ಹೆಸರು.[೧೨]

ಇಲ್ಲಿ ಬರುವ **ಹನ್ನಿಬ್ಬರು** ಎಂದರೆ ಯಾರು? ಇದನ್ನು ತಿಳಿದುಕೊಳ್ಳಲಿಕ್ಕೆ ಮತ್ತೆ ಶಾಸನದ ಸಹಾಯವು ಬೇಕು. ಶಾಸನಗಳಲ್ಲಿ ಕಾಣಿಸಿಕೊಳ್ಳುವ ಸಂದರ್ಭಗಳನ್ನು ನೋಡಿದರೆ ಹಿಂದಿನ ಕಾಲದಲ್ಲಿ ಹನ್ನೆರಡು ಜನ ಶೂರರು ಪರಾಕ್ರಮಶಾಲಿಗಳೆಂದು ಪ್ರಖ್ಯಾತಿ ಪಡೆದಿದ್ದಂತೆ ಗೊತ್ತಾಗುತ್ತದೆ. ವಿಜಯನಗರದ ಕಾಲದ ಒಂದು ಶಾಸನದಲ್ಲಿ 'ಗುತ್ತಿಹನ್ನಿಬ್ಬರ ಗಂಡ' ಎಂಬ ಬಿರುದು ಒಬ್ಬ ನಾಯಕನ ಪ್ರಶಸ್ತಿಯಲ್ಲಿ ದೊರೆಯುತ್ತದೆ. ಗುತ್ತಿಯ (ಚಂದ್ರಗುತ್ತಿಯ?) ಆ ಹನ್ನೆರಡು ನಾಮಾಂಕಿತ ಶೂರರಿಗಿಂತ ಹೆಚ್ಚಿನ ಶೂರ ಎಂಬುದು ಇದರ ಅಭಿಪ್ರಾಯ. ಇಲ್ಲಿ ಆನುಷಂಗಿಕವಾಗಿ ಇನ್ನೊಂದು ಮಾತನ್ನು ನಾವು ಲಕ್ಷಿಸಬಹುದು. ಮೇಲೆ ಉದಾಹರಿಸಿದ ವಚನದಲ್ಲಿ ಛತ್ರಭೂಷಿತನಾದ ಅಶ್ವಾರೋಹಿ ಶೂರನ ಪ್ರಸ್ತಾವವು ಬರುತ್ತದೆ. ಈ ವರ್ಣನೆಯನ್ನು ಜ್ಞಾಪಕಕ್ಕೆ ತರುವಂತಹ, ಕೊಡೆ ಹಿಡಿದ ಸೇವಕನ ಜೊತೆಯಲ್ಲಿ ಕುದುರೆ ವೀರರನ್ನು ಚಿತ್ರಿಸುವ ಅನೇಕ ವೀರಗಲ್ಲುಗಳು ನಮ್ಮ ನಾಡಿನಲ್ಲಿ ದೊರೆಯುತ್ತವೆ.

ಈ ಹನ್ನಿಬ್ಬರಂತೆ ಪ್ರಸಿದ್ಧಿವೆತ್ತ ಐವತ್ತೆರಡು(೫೨) ಯೋಧರ ನಿರ್ದೇಶಗಳಾದರೂ ಶಾಸನ ವಾಙ್ಮಯದಲ್ಲಿ ಸಿಕ್ಕುತ್ತವೆ. ಇವರಿಗೆ 'ಬಾವನ್ನ ವೀರರೆಂ'ದು ಹೆಸರು. ಕಲಬರ್ಗಿ ಜಿಲ್ಲೆಯ ಸೇಡಂ ಗ್ರಾಮದ ಒಂದು ಶಾಸನದಲ್ಲಿ[೧೩] ಕಂಚಿ ಪಟ್ಟಣದ ಕೋಟೆ ಬಾಗಿಲುಗಳನ್ನು ಭೇದಿಸಲು ಸಮರ್ಥರಾದ ಸೇಡಿಂಬದ (ಇಂದಿನ ಸೇಡಂ) ಐವತ್ತೆರಡು ಅನಾದಿ ವೀರರನ್ನು ಸ್ತುತಿಸಿದೆ. ಇಂತಹ ಉದಾಹರಣೆಗಳ ಬೆಳಕಿನಲ್ಲಿ ಮೇಲ್ಕಂಡ ಬಸವೇಶ್ವರ ವಚನದಲ್ಲಿಯ ಹನ್ನಿಬ್ಬರು ಎಂಬ ಮಾತಿಗೆ ಸರಿಯಾದ ಅಭಿಪ್ರಾಯವನ್ನು ಕಂಡುಕೊಳ್ಳಬೇಕಾಗುತ್ತದೆ.

### ಶಾಸನ ಮತ್ತು ಸಾಹಿತ್ಯಗಳ ಅನ್ಯೋನ್ಯ ಪ್ರಭಾವ

ಮೇಲೆ ವರ್ಣಿಸಿದ ಚಾರಿತ್ರಕ ಆವರಣದ ಇನ್ನೊಂದು ಪರಿ ಶಾಸನ ವಾಙ್ಮಯ ಮತ್ತು ಸಾಹಿತ್ಯ ಕೃತಿಗಳಲ್ಲಿ ಗೋಚರಿಸುವ ಅನ್ಯೋನ್ಯಪ್ರಭಾವ. ಕನ್ನಡ ಸಾಹಿತ್ಯದಲ್ಲಿ ಕೀರ್ತಿವೆತ್ತ ಪ್ರತಿಭಾವಂತ ಕವಿಗಳ ವರ್ಚಸ್ಸು ಶಾಸನ ವಾಙ್ಮಯದ ಮೇಲೆ ಕಂಡು ಬರುತ್ತದೆ. ಇಂತಹ ಕೆಲವು ಕವಿಗಳು ಕೆಲವಾರು ಶಾಸನಗಳನ್ನು ಬರೆದುಕೊಟ್ಟರೆನ್ನುವುದಕ್ಕೆ ಆಧಾರಗಳು

---

[೧೦] South Indian Inscriptions, Vol. IX, pt. I, No. 101.

[೧೧] Bombay-Karnatak Collection, No. 1 of 1940-41.

[೧೨] ಬಸವೇಶ್ವರನ ವಚನಗಳು (ಅದೇ), ಪು. ೪, ವ. ೧೦.

[೧೩] ಲೇಖಕನ ಸ್ವಂತ ಶಾಸನ ಸಂಗ್ರಹ, ಅಪ್ರಕಾಶಿತ.

ಸಿಕ್ಕುತ್ತವೆ.[೧೪] ಇದೇ ಮೇರೆಗೆ ಶಾಸನ ವಾಙ್ಮಯದ ಮುದ್ರೆಯಾದರೂ ಕೆಲವು ಸಾಹಿತ್ಯ ಕೃತಿಗಳಲ್ಲಿ ಮೂಡಿದಂತೆ ವ್ಯಕ್ತವಾಗುತ್ತದೆ. ಈ ವಿಷಯವನ್ನು ಈ ಹಿಂದೆ ಸ್ವಲ್ಪ ದೂರಕ್ಕೆ ಚರ್ಚಿಸಿದ್ದೇನೆ.[೧೫] ಇಲ್ಲಿ ಇನ್ನೂ ಕೆಲವು ಉದಾಹರಣೆಗಳನ್ನು ಕೊಡುವೆ. ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಲಕ್ಕುಂಡಿ ಗ್ರಾಮದ ಒಂದು ಶಾಸನದಲ್ಲಿ[೧೬] (ಕಾಲ ಕ್ರಿ. ವ. ೧೦೦೭) ದಾನ ಚಿಂತಾಮಣಿ ಅತ್ತಿಮಬ್ಬೆಯ ಧಾರ್ಮಿಕ ಪ್ರಭಾವವನ್ನು ಕೀರ್ತಿಸುವ ಸಂದರ್ಭದಲ್ಲಿ ಈ ಪದ್ಯವು ಬರುತ್ತದೆ.

ಉನ್ನತ ಕಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಪೋಗಿ ಕಾ-
ಣ್ಬನ್ನೆಗಮುನ್ನಮಂ ತೊಱೆದು ಪರ್ವತಮಂ ಮುದದೇಱೆ
ತಜ್ಜಿನಾ-
ಸನ್ನದೊಳತ್ತಿಮಬ್ಬೆಗೆ ಪಥಶ್ರಮಮಾದೊಡಕಾಳ ವೃಷ್ಟಿ ಯಾ-
ಯ್ತಿನ್ನವು ದೇವಭಕ್ತಿಗದು ಚೋದ್ಯಮೆ ಕೊಳ್ಳವೆ ಪುಷ್ಪವೃಷ್ಟಿಗಳ್ ॥

ಈ ಪದ್ಯವು ರನ್ನಕವಿಯ ಅಜಿತತೀರ್ಥಕರ ಪುರಾಣ ತಿಲಕದಲ್ಲಿ (ಒಂದನೆಯ ಆಶ್ವಾಸ, ಪದ್ಯ ೬೧) ಹೆಚ್ಚುಕಡಮೆ ಯಥಾವತ್ತಾಗಿ ಕಾಣಿಸಿಕೊಳ್ಳುತ್ತದೆ. ಇನ್ನೂ ಒಂದು ಹೆಜ್ಜೆ ಮುಂದುವರಿದು ಲಕ್ಕುಂಡಿಯ ಈ ಶಾಸನವನ್ನು ಬರೆದಾತನು ರನ್ನಕವಿ ಆಗಿರಬಹುದು ಎಂದು ಊಹಿಸಲವಕಾಶವಿದೆ. ರನ್ನನ ಅದೇ ಕೃತಿಯಲ್ಲಿ ಅತ್ತಿಮಬ್ಬೆಯ ಪಾವನತೆಯನ್ನು ವರ್ಣಿಸುವ ಪದ್ಯವು ಹೀಗಿದೆ.

ಬಿಳಿಯರಳೆಯಂತೆ ಗಂಗಾ-
ಜಳದಂತೆಸೆವ ಜಿತಸೇನ ಮುನಿ ಪತಿಯ ಗುಣಾ-
ವಳಿಯಂತೆ ನೆಗಳ್ದ ಕೊಪಣಾ-
ಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ ॥
ಆಶ್ವಾಸ ೧೨, ಪ. ೬

ಧಾರವಾಡ ಜಿಲ್ಲೆಯ ಮುಂಡರಗಿ ಪೇಟದ ಆಲೂರ ಗ್ರಾಮದ ಒಂದು ಶಾಸನದಲ್ಲಿ[೧೭] ಸುರಿಗೆಯ ನಾಗರಸ ಎಂಬವನನ್ನು ವರ್ಣಿಸುವ ಪದ್ಯವು ಹೀಗಿದೆ.

ವರ ಗಾಂಗೋದಕದಂದದಿ-
ನರಳಿಯ ಮರದಂದದಿಂ ಪವಿತ್ರಮೆನಲ್ ಬಿ-
ತ್ತರಿಸಿದ ತದೀಯ ವಿಪ್ರಾ-
ಭರಣಂ ನಾಗರಸರತ್ರಿಗೋತ್ರಪವಿತ್ರಂ ॥

ಈ ಶಾಸನ ಪದ್ಯದಲ್ಲಿ ಮೇಲ್ಕಂಡ ಅಜಿತ ಪುರಾಣದಲ್ಲಿಯ ಪದ್ಯದ ಪ್ರಭಾವವನ್ನು ಗುರುತಿಸಬಹುದಾಗಿದೆ. ಈ ಶಾಸನ ಕಾಲ ೧೧೨೪. ಈ ಶಾಸನವನ್ನು ಬರೆದ ಕವಿ ಶಾಂಡಿಲ್ಯ ಗೋತ್ರದ ಕುಳಕರಣಿ ಚಟ್ಟಿಮಯ್ಯನ ಅಳಿಯ ಸಂಕಣ್ಣ.

ಇನ್ನು ಹರಿಹರ ಕವಿಯ ಗಿರಿಜಾ ಕಲ್ಯಾಣದಲ್ಲಿ ಬರುವ ಸಮುದ್ರ ವರ್ಣನೆಯ ಈ ಮುಂದಿನ ಪದ್ಯವನ್ನು ಪರಿಶೀಲಿಸುವ.

ವಿಲಸತ್ ಕಲ್ಲೋಲ ಮಾಲಾ ಪ್ರತಿಹತ ವಿತತ ಪ್ರೋಚ್ಚಳ
ಚ್ಛೈಲ ಕೋಲಾ-
ಹಲಿತೋದ್ವೃತ್ ಫೇನ ನಾನಾ ಕರಿಮಕರ ವಿಪುಚ್ಛಪ್ರಹಾರ
ಪ್ರತಾಪೋ-
ದ್ಗಳಿತಾನಂತ ಪ್ರರತ್ನ ಪ್ರಬಲ ಜಲಚರಾನೀಕ ಗಂಭೀರ ಭೀಮೋ-
ಜ್ವಲರಾವೋದ್ಭೂತ ತಪೋನ್ಮಿಳಿತ ಘುಳು ಘುಳು ಧ್ವಾನ
ಮಂಭೋ ನಿಧಾನಂ ॥
ಆಶ್ವಾಸ ೧, ಪ. ४೭

ಇದು ಜಟಿಲ ಪದಭೂಯಿಷ್ಠವಾದ ಚಂಪೂ ಶೈಲಿಯ ಬಿಗುವಿನ ರಚನೆ. ಈ ಮಾದರಿಯ ಪದ್ಯಗಳು ಹರಿಹರನಿಗಿಂತ ಪೂರ್ವಕಾಲದ ಶಾಸನಗಳಲ್ಲಿ ದೊರೆಯುತ್ತವೆ. ಸಮುದ್ರವರ್ಣನೆಗೆ ಮೀಸಲಾದ ಶಾಸನದಲ್ಲಿಯ ಒಂದು ಪದ್ಯವನ್ನು ಇಲ್ಲಿ ಉದಾಹರಿಸುವೆ.

ಮಕರ ಬ್ರಾತಾಭಿ ಘಾತೋಚ್ಚಳಿತ ಕಮಠ ಸಂಘಟ್ಟ ಸಂಸ್ಪರ್ಧಿ
ಮೀನ-
ಪ್ರಕರಪ್ರಕ್ಷೋಭಿ ತೋದ್ವೃತ್ತರಳ ತರ ತರಂಗೋತ್ಕರ ಕ್ಷಿಪ್ತ ಮುಕ್ತಾ-
ನಿಕರಂ ಕಣ್ಗೆಯ್ದೆ ಚೆಲ್ವಂ ತಳೆದುದವಿರಳೋತ್ತಾಳ ಕಲ್ಲೋಳ
ಮಾಳಾ-
ಧಿಕ ಸಂಘರ್ಷಪ್ರಜಾತ ಪ್ರಬಳ ಘನಘನ ಧ್ವಾನ ರೌದ್ರಂ
ಸಮುದ್ರಂ ॥

---

೧೪ ಜನ್ನನ ಯಶೋಧರ ಚರಿತೆಯ ಪೀಠಿಕೆ (ಕೆ. ವ್ಹಿ. ರಾಘವಾಚಾರ್ಯ ಸಂಪಾದಿತ).

೧೫ ಶಾಸನ ಮತ್ತು ಸಾಹಿತ್ಯ; ಕ. ಸಾ. ಪ. ಪತ್ರಿಕೆ, ೧೯೪೬ ಜೂನ.

೧೬ Bombay-Karnatak Inscriptions, Vol. I, pt. I, No. 52. ಇದಲ್ಲದೆ ಮೇಲ್ಕಂಡ ಶಾಸನದಲ್ಲಿಯ 'ಜಿನಪದ ಪಂಕಜ ಭ್ರಮರ' ಎಂಬುದಾಗಿ ಮೊದಲಿಡುವ ಪದ್ಯವಾದರೂ ಅಜಿತ ಪುರಾಣದಲ್ಲಿ (ಆ ೧, ಪ. ೬೬) ಕಾಣಿಸಿಕೊಳ್ಳುತ್ತದೆ. ಈ ಶಾಸನದ ಸಹಾಯದಿಂದ ಅಜಿತ ಪುರಾಣದಲ್ಲಿಯ ಕೆಲವು ಪದ್ಯ ಭಾಗಗಳ ಅಭ್ಯಾಸಕ್ಕೆ ಸದವಕಾಶವು ದೊರೆಯುತ್ತದೆ.

೧೭ Ibid., Vol. I, pt. II, No. 173.

ಈ ಶಾಸನವು ಕೊಪ್ಪಳ ಜಿಲ್ಲೆಯ ಕುಕನೂರು ಗ್ರಾಮದ್ದು.[೧೮] ಇದೇ ವಿಧವಾಗಿ ಸಮುದ್ರವನ್ನು ಬಣ್ಣಿಸುವ ಪದ್ಯಗಳು ಬೆಣಚಮಟ್ಟಿ,[೧೯] ರೋಣ,[೨೦] ಮೊದಲಾದ ಗ್ರಾಮಗಳ ಶಾಸನಗಳಲ್ಲಿ ದೊರೆಯುತ್ತವೆ. ಇವುಗಳನ್ನು ಪರೀಕ್ಷಿಸಿದರೆ ಇಂತಹ ವರ್ಣನೆಯ ಒಂದು ಸಂಪ್ರದಾಯವೇ ಆ ಕಾಲದಲ್ಲಿ ರೂಢವಾಗಿದ್ದಂತೆ ತೋರುತ್ತದೆ. ಈ ಶಾಸನಗಳೆಲ್ಲ ಹರಿಹರನಿಗಿಂತ ಹಿಂದಿನ ಕಾಲದುವಾಗಿರುವುದರಿಂದ ಈ ಪೂರ್ವ ಸಂಪ್ರದಾಯವನ್ನು ಅನುಸರಿಸಿ ಹರಿಹರ ಕವಿ ಮೇಲಿನ ಪದ್ಯವನ್ನು ರಚಿಸಿದನೆಂದು ನಿಷ್ಕರ್ಷೆಯಾಗುತ್ತದೆ.

## ಜೈಮಿನಿ ಭಾರತ

ಲಕ್ಷ್ಮೀಶ ಕವಿಯ ಜೈಮಿನಿ ಭಾರತದ ೨ನೆಯ ಸಂಧಿಯ ೫೦ನೆಯ ಪದ್ಯವು ಹೀಗಿದೆ:—

> ಎನಲಹುದು ಬಳಿಕೇನು ನಿಮ್ಮಡಿಯ ಸೇವಕರ
> ಘನತೆಯೊಳು ಕೃತಕೃತ್ಯರಹಿರಲಾ ನೀವಿದರೊ –
> ಳನುಮಾನವೇ ಪಾಂಡವಸ್ಥಾಪನಾಚಾರ್ಯನೆಂದು
> ಧರೆಯುಳ್ಳನ್ನೆಗಂ ।
> ಜನ ಮಾಡದಿರ್ದಪುದೆ ಸಾಕದಂತಿರಲಿ ಮುಂ –
> ದೆನಗೆ ಮಾಡುವ ರಾಜಕಾರ್ಯಮಂ ಬೆಸವೇಳ್ವು
> ದೆನುತೆ ಭೀಮನ ಕಡೆಗೆ ಮೊಗದಿರುಹಿದರಸಂಗೆ ನಳಿನಾಕ್ಷ
> ನಿಂತೆಂದನು ॥

ಈ ಪದ್ಯದಲ್ಲಿ ಕಾಣಿಸಿಕೊಳ್ಳುವ 'ಪಾಂಡವ ಸ್ಥಾಪನಾಚಾರ್ಯ' ಎಂಬ ಪದವು ಲಕ್ಷಣೀಯವಾಗಿದೆ. ವಿಚಾರ ಪೂರ್ವಕವಾಗಿ ನೋಡಿದರೆ ಈ ಪದವನ್ನು ಕವಿ ಸಾಕೂತವಾಗಿ ಪ್ರಯೋಗಿಸಿದ್ದಾನೆಂದು ಕಂಡು ಬರುತ್ತದೆ. ಈ ಪದದ ಹಿನ್ನೆಲೆಯಲ್ಲಿ ಆಳವಾದ ಚಾರಿತ್ರಕ ಆವರಣವಿದೆ. ಈ ಪದದ ಯಥಾರ್ಥ ಅಭಿಪ್ರಾಯವನ್ನು ಮತ್ತು ಇದರಿಂದ ಧ್ವನಿತವಾಗುವ ಅರ್ಥಸಂಪತ್ತಿಯನ್ನು ಅರಿತುಕೊಳ್ಳಲು ತತ್ಕಾಲೀನ ರಾಜಕೀಯ ಪರಿಸ್ಥಿತಿಯನ್ನು ಮತ್ತು ಶಾಸನ ಸಾಹಿತ್ಯವನ್ನು ಅವಲೋಕಿಸುವ ಅಗತ್ಯವಿದೆ. ಈ ಕಾಲದಲ್ಲಿ ರಾಜ್ಯಗಳು ಬೀಳುತ್ತಿದ್ದುವು ಮತ್ತು ಏಳುತ್ತಿದ್ದುವು. ಬಿದ್ದ ರಾಜ್ಯವನ್ನು ಎಬ್ಬಿಸಿ ಮತ್ತೆ ನಿಲ್ಲಿಸಲು ಕೆಲವು ರಾಜರು ಸಹಾಯಕರಾಗುತ್ತಿದ್ದರು. ಇಂತಹ ಸಮರ್ಥ ರಾಜರಿಗೆ ಆ ಆ ರಾಜ್ಯದ 'ಸ್ಥಾಪನಾಚಾರ್ಯ' ಇಲ್ಲವೆ 'ಪ್ರತಿಷ್ಠಾಚಾರ್ಯ' ಎಂಬ ಬಿರುದು ಅನ್ವಯಿಸುತ್ತಿದ್ದಿತು. ಮಾತಿಗೆ ಅನೇಕ ಉದಾಹರಣೆಗಳು ದೊರೆಯುತ್ತವೆ. ದೇವಗಿರಿ ಯಾದವ ಮನೆತನದ ಸಿಂಘಣನು ಆಂಧ್ರದೇಶದ ಕಾಕತೀಯರನ್ನು ಸೋಲಿಸಿ ತಿರುಗಿ ಅವರ ರಾಜ್ಯಕ್ಕೆ ಬದುಕನ್ನು ನೀಡಿದುದರಿಂದ 'ತೆಲಂಗರಾಯ ಸ್ಥಾಪನಾಚಾರ್ಯ' ಎಂಬ ಬಿರುದು ಆತನ ಪ್ರಶಸ್ತಿಯಲ್ಲಿ ಕಾಣಿಸಿಕೊಂಡಿತು.[೨೧] ಈ ಯಾದವ ಸಿಂಘಣನಕಾಲ ೧೩ನೆಯ ಶತಮಾನದ ಪೂರ್ವಾರ್ಧ. ಹೊಯ್ಸಳ ಇಮ್ಮಡಿ ನರಸಿಂಹನು ನಂದುತ್ತಿದ್ದ ಚೋಳ ಅರಸರ ಆಳಿಕೆಯ ದೀಪವನ್ನು ಆರಗೊಡದೆ ಮತ್ತೆ ಬೆಳಗಿಸಿದದನು. ಈ ಮೂಲಕ 'ಚೋಳರಾಜ್ಯ ಪ್ರತಿಷ್ಠಾಚಾರ್ಯ' ಎಂಬ ಬಿರುದು[೨೨] ಆತನ ಪ್ರಶಸ್ತಿಗೆ ಶೋಭೆಯನ್ನು ತಂದಿತು ಈ ಹೊಯ್ಸಳ ರಾಜನ ಕಾಲ ಕ್ರಿ. ವ. ಸು. ೧೨೨೦-೧೨೩೫. ಈ ಮೊದಲಾದ ಉದಾಹರಣೆಗಳನ್ನು ಪರಾಮರ್ಶಿಸಿ ಅವುಗಳ ಹಿನ್ನೆಲೆಯಲ್ಲಿ 'ಪಾಂಡವ ಪ್ರತಿಷ್ಠಾಚಾರ್ಯ' ಎಂಬ ಪ್ರಶಸ್ತಿಯನ್ನು ಕವಿ ಶ್ರೀಕೃಷ್ಣನಿಗೆ ಕೊಟ್ಟಿರುವ ಅಂಶವನ್ನು ಪರೀಕ್ಷಿಸಿದರೆ, ಈ ಪ್ರಶಸ್ತಿಯ ಔಚಿತ್ಯವೂ ಇದನ್ನು ಬಳಸಿದ ಕವಿಯ ಚಾತುರ್ಯವೂ ಚೆನ್ನಾಗಿ ಗೋಚರವಾಗುತ್ತವೆ.

ಜೈಮಿನಿ ಭಾರತದ ೭ನೆಯ ಮತ್ತು ೩೬ನೆಯ ಸಂಧಿಗಳಲ್ಲಿ ಒಂದು ಪ್ರದೇಶದ ಅಧಿಕಾರ ಎಂಬರ್ಥದಲ್ಲಿ ವಳಿಕೆ ಎಂಬ ಪದವನ್ನು ಪ್ರಯೋಗಿಸಿದ ಉದಾಹರಣೆಗಳು ಸಿಕ್ಕುತ್ತವೆ. ಅದು ಹೀಗೆ.

೧. ಆ ಕುಳಿಂದಂ ದುಷ್ಟಬುದ್ಧಿಯ ನಿಯೋಗದಿಂ –
> ದಾ ಶಾಸನದ ನಾಡ ವಳಿತಮಂ ಕೈಕೊಂಡು
> ಭೂಕಾಂತನಾಗಿಹಂ ಚಂದನಾವತಿಯೆಂಬ ಪುರದೊಳವ
> ನಿತ್ತಿಯಿಂದೆ ।
> ಸಂ. ೨೮, ಪ. ೫೩

---

೧೮ ಲೇಖಕನ ಸ್ವಂತ ಶಾಸನ ಸಂಗ್ರಹ, ಅಪ್ರಕಾಶಿತ.

೧೯ Epigraphia Indica, Vol. XXI, p. 115.

೨೦ Ibid., Vol. XIX, p. 220.

೨೧ Journal of the Bombay Branch of the Royal Asiatic Society, Vol. XII, p. 35.

೨೨ Epigraphia Indica, Vol. VII, p. 160; etc.

೨. ಹೆಕ್ಕಳಿಸಿ ರಾಜ್ಯಮಂ ಕೊಟ್ಟೊಡೆನ್ನಂ ಮರೆದು
ಸೊಕ್ಕಿ ತನಗೊರ್ವ ಮಗನಂ ಮಾಡಿಕೊಂಡವನ
ಮಕ್ಕಳಾಟಿಕೆಯಿಂದೆ ದೇವತಾಲಯ ತಟಾಕಾರಾಮ
ಕೊಡವೆಗಳನು ।

ಇಕ್ಕಿ ಕಿಡಿಸಿಪನೆಂದವನ ವಳಿತಮಂ ತೆಗೆದು
ಕಕ್ಕಸದ ಬಂಧನದೊಳಿರಿಸಿ –

ಸಂ. ೩೧, ಪ. ೨೭.

ವಳಿತ ಎಂಬ ಪದವು ಸಂಸ್ಕೃತ ವಲಯ ಎಂಬುದಕ್ಕೆ ಸಂಬಂಧಿಸಿದುದಾಗಿರಬೇಕು. ಇದರ ದೇಶವಾಚಕ ಅರ್ಥವು ಸಂಸ್ಕೃತಕ್ಕೆ ಅರಿದು. ಕನ್ನಡದಲ್ಲಿಯ ಇದರ ರೂಢಾರ್ಥ ರಾಜ್ಯದ ಒಂದು ಚಿಕ್ಕ ಭಾಗ, ಪ್ರದೇಶ, ಇ. ಮೇಲಿನ ಅವತರಣಿಕೆಗಳಲ್ಲಿ ಇಂತಹ ಪ್ರದೇಶದ ಅಧಿಕಾರ ಎಂಬರ್ಥದಲ್ಲಿ ಈ ಶಬ್ದವನ್ನು ಉಪಯೋಗಿಸಿದೆ. ಈ ಶಬ್ದಕ್ಕೆ ಚಾರಿತ್ರಿಕ ಆವರಣವಿದೆ. ಶಾಸನ ಸಾಹಿತ್ಯವನ್ನು ಪರಿಶೀಲಿಸಿದರೆ ಸ್ಥೂಲವಾಗಿ ೧೨-೧೩ನೆಯ ಶತಮಾನದ ವರೆಗೆ ನಾಡು, ಕಂಪಣ, ಮೊದಲಾದ ದೇಶವಿಭಾಗ ಸೂಚಕ ಪದಗಳು ಹೆಚ್ಚಾಗಿ ಬಳಕೆಯಲ್ಲಿದ್ದಂತೆಯೂ ಮುಂದೆ ೧೪-೧೫ನೆಯ ಶತಮಾನದಿಂದ ಸೀಮೆ, ರಾಜ್ಯ, ವಳಿತ, ವೇಂಠೆ, ಮುಂತಾದ ಪದಗಳು ದೇಶವಿಭಾಗಗಳನ್ನು ಸೂಚಿಸಲು ಪ್ರಯೋಗಕ್ಕೆ ಬಂದುವೆಂತಲೂ ಪ್ರಕಟವಾಗುತ್ತದೆ. ಶಾಸನ ಸಾಹಿತ್ಯದ ಈ ಸಾಕ್ಷ್ಯವನ್ನು ಮುಂದಿಟ್ಟು ಕೊಂಡು ನೋಡಿದರೆ ಲಕ್ಷ್ಮೀಶನ ಕಾಲವು ೧೫ನೆಯ ಶತಮಾನಕ್ಕೆ ಹಿಂದೆ ಹೋಗಲಾರದು ಎಂಬ ಸ್ಥೂಲ ಸೂಚನೆಯೂ ದೊರೆಯುತ್ತದೆ.

---

# ಶ್ರೀರಾಮ ವಿಜಯ

ಶ್ರೀ ಟಿ. ಎಸ್. ರಾಮಸ್ವಾಮಯ್ಯ

ಈ ಗ್ರಂಥವು ಉತ್ತರಕಾಂಡವೂ ಸೇರಿ, ಒಟ್ಟು ಏಳು ಕಾಂಡಗಳಿಂದ ಕೂಡಿದ "ರಾಮಾಯಣ" ಗ್ರಂಥವಾಗಿದೆ. ಇದನ್ನು ರಚಿಸದ ಕವಿಯು, "ಶ್ರೀಮತ್ಪರಮ ಹಂಸ ಪರಿವ್ರಾಜಿಕಾಚಾರ್ಯ ಜಯರಾಮದಾಸ ಗುರು ಸಾಂಪ್ರದಾಯಕ ಶ್ರೀ ರಾಮಬ್ರಹ್ಮಾರ್ಯ ಪದಕಮಲ ಭೃಂಗಾಯಮಾನ, ಶ್ರೀಮದ್ಬಿಳಿ ಚೋಡ್ವಂಶ ಪಯಃ ಪಾರಾವಾರ ಪುಷ್ಯ ಪೌರ್ಣಿಮ ಚಂದ್ರೋದಯ ಯಲ್ಲಾರ್ಯ ತನೂಭವ "ಆತ್ಮಾರಾಮದಾಸ"ನೆಂದು ಹೇಳಿಕೊಂಡಿದಾನೆ. "ಆತ್ಮಾರಾಮದಾಸ"ನೆಂಬುದು ಕವಿಯು ತನ್ನನ್ನು ಕರೆದುಕೊಂಡಿರುವ ಹೆಸರಾಗಿರಬಹುದು. ಈತನ ನಿಜವಾದ ಹೆಸರು ಗ್ರಂಥದಲ್ಲಿ ಕಂಡು ಬರುವುದಿಲ್ಲ.

ಗ್ರಂಥಾಂತ್ಯದಲ್ಲಿ "ಮೆರೆವ ಶಕ ತಾ, ಶಾಲಿವಾಹನ । ವರುಷ ಸಾವಿರದೇಳನೂರದು। ಮರಳಿ ಮೇಲೈವತ್ತು ಯರಡನೆ ವಿಕೃತಿನಾಮವಹ ॥ ವರುಷ ವೈಶಾಖ ಶಿವ ಮಾಸದಿ । ಮೆರೆವ ಸಿತ ಪಕ್ಷದಲಿ ದಶಮಿಯಾ । ತರಣಿ ವಾಸರ ತರಣಿ ವಂಶಜ ಚರಿತೆ ಪೂರ್ಣವೆನೆ ॥" ಎಂಬುದಾಗಿ ನಿರೂಪಿಸಿದೆ. ಈ ಗ್ರಂಥವು ರಚಿತವಾಗಿ ೧೨೦ ವರ್ಷಗಳಾಗಿರುತ್ತವೆ.

ಇದೊಂದು ಭಾಮಿನೀಷಟ್ಪದಿಯಲ್ಲಿ ನಿರೂಪಿಸಲ್ಪಟ್ಟ ರಾಮಾಯಣದ ನೀಳ್ಗಬ್ಬ. ಇದರಲ್ಲಿ ಬಾಲಕಾಂಡ, ೧೨ ಅಯೋಧ್ಯಾಕಾಂಡ ೪, ಅರಣ್ಯಕಾಂಡ ೪, ಕಿಷ್ಕಿಂಧಾಕಾಂಡ ೨, ಸುಂದರಕಾಂಡ ೫, ಯುದ್ಧಕಾಂಡ ೧೦, ಉತ್ತರಕಾಂಡ ೭ ಅಂತೂ ಒಟ್ಟು ೪೪ ಸಂಧಿಗಳೂ ೫೩೭೨ ಪದಗಳೂ ಇವೆ. ಪ್ರತಿ ಸಂಧಿಯ ಪ್ರಾರಂಭವಲ್ಲಿಯೂ ಶ್ರೀ ರಾಮನ ಮಹಿಮೆಯನ್ನು ವರ್ಣಿಸುವ ಒಂದು ಷಟ್ಪದಿ ಕಡೆಯಲ್ಲಿ ಕೆಳಗಿನ ಮಂಗಳ ಶ್ಲೋಕ ಇರುತ್ತವೆ.

"ರಾಮಚರಿತಾಮೃತ ಸಮುದ್ರಂ । ಸೀಮೆದೋರದೆ ತುಂಬಿತುಳುಕದೆ । ಪ್ರೇಮದಿಂ ಪವನಜ ಕಥಾ ಕಲ್ಲೋಲಿನಿಯ ಬಿಡದೆ ॥

ತಾ ಮುದದಲೊಡಗೂಡಿಯೊಪ್ಪುವು । ದೀ ಮಹಾಕಾವ್ಯವನು ಕೇಳ್ವರ । ಸ್ವಾಮಿ ಯಾತ್ಮಾರಾಮ ಬಿಡದವರನುದಿನಂ ಪೊರೆವಂ? ॥

ಕವಿಯು "ಜಯರಾಮದಾಸ ಗುರುಸಾಂಪ್ರದಾಯದವನಾಗಿ, ಭಕ್ತಿಪಂಥಾನುಗಾಮಿಯಾಗಿದಾನೆ. ಗ್ರಂಥಾರಂಭದಲ್ಲಿ, ಸಂಪ್ರದಾಯವನ್ನನುಸರಿಸಿ, ದೇವತಾಸ್ತುತಿಯನ್ನು ಮಾಡಿದಾನೆ. ವಿಷ್ಣು, ಲಕ್ಷ್ಮಿ, ಶಿವ,

ಪಾರ್ವತಿ, ಗೌರಾಬ್ಧಿಯ ವಿರೂಪಾಕ್ಷ, ಶಾರದೆ, ಗಣಪತಿಯರನ್ನು ಸ್ತುತಿಸಿ, ನಂತರ ಗೌರಾಬ್ಧಿ (ಗೌರ ಸಮುದ್ರ)ಯ ಮಾರಿಕಾಂಬಕೆಯನ್ನು ಭಕ್ತಿಯಿಂದ ಹೊಗಳಿ ಆಕೆಯನ್ನು ಕೃತಿಗಧಿದೇವತೆಯನ್ನಾಗಿ ಕರೆ ದಿದಾನೆ.

"ತಾರಿಸುವೆ ಸಂಸಾರ ಶರಧಿಯ । ಮೀರಿ ಮಿಕ್ಕರ ಹಲ್ಲ ಮುರಿಯಲ್ । ಮಾರಿಯಾಗಿಯೇ ಮೆರೆವೆ ನೀ ಗೌರಾಬ್ಧಿಯೊಳು ನಿಂದು ॥ ಗೌರಿ ನೀನಹುದೆಂದು ಬೇಡುವೆ । ಮಾರುತಾತ್ಮಜ ವಿಜಯ ಕೃತಿ ನೀ । ಪ್ರ ವಿಸು ಕರುಣದಲಿ, ನವರಸಭರಿತ ರಾಜಿಸಲಿ ॥

ಮಾರಿಕಾಂಬಿಕೆ ನೀನು ಕೃತಿ । ಗಧಿಕಾರಿಯಾಗಿಯೆ ನುಡಿಸುವೀಕೃತಿ । ಯಾರು ಬರೆವರು ಓದಿ ಕೇಳ್ವರು ಭಕುತಿ ಭಾವದಲಿ ॥ ಭೂರಿಕೃತದುರ್ದೋಷಬಲದಿಂ । ಸಾರುತಿಹ ಕಂಟಕವ, ಕಷ್ಟವ, । ಬೇರುಸಹಿತೀಡಾಡಿ ಹರುಷಗಳಿತ್ತು ಪೋಷಿಪುದೂ ॥ ಎಂದು ಪ್ರಾರ್ಥಿಸಿದಾನೆ.

ಮುಂದಿನ ಪೀಠಿಕಾ ಪದ್ಯಗಳಿಂದ, ಈತನು "ಪಂಡರೀಶನ ವರದಿ ಶ್ರೀಧರ । ಪಂಡಿತಾರ್ಯರು ರಾಮ ವಿಜಯೋ । ದ್ದಂಡ ರಚನಾಗ್ರಂಥಮಂ ಪೇಳ್ವರ್ಪರದ ನೋಡಿ ॥ ಕಂಡು ಕೇಳಿದ ಮಾತ್ರದೊಳು ಕೋ। ದಂಡ ದೀಕ್ಷಾಗುರುವೆ ತಾ, ಹೃ । ತ್ಪುಂಡರೀಕದಿ ನಿಂದು ಪ್ರೇರಿಸಿದಂತೆ ರಚಿಸುವೆನು ॥ ಎಂಬುದಾಗಿ ಹೇಳಿ ಕೊಂಡಿದಾನೆ.

ಜ್ಞಾನೇಶ್ವರರೇ ಮೊದಲಾದ ದಾಸಪರಂಪರೆಯನ್ನು ಮನಸಾರೆ ಹೊಗಳಿ ಅವರ ಕರುಣಾದೃಷ್ಟಿಯನ್ನು ಕೋರಿ ದಾನೆ. ಹಾಗೆಯೇ "ಭಾರ್ಗವಪುರ"ದ (ಪರಶರಾಂ ಪುರ) ತಿರುಮಲಸ್ವಾಮಿಯೇ ತನಗೆ ಇದನ್ನು ಪ್ರೇರಿಸಿ ಬರೆಸಿದಂತೆ ಹೇಳುತ್ತಾನೆ.

ಈ ಗ್ರಂಥದ ವೈಶಿಷ್ಟ್ಯವೇನೆಂದರೆ, ಕವಿಯು ರಾಮಚರಿತೆಯನ್ನು ಪ್ರಧಾನವಾಗಿಟ್ಟುಕೊಂಡು, ಇದ ರೊಂದಿಗೆ ಹನುಮದ್ವಿಲಾಸವನ್ನೂ ಹೆಣೆದಿದಾನೆ.

ಪರಮ ಪೂರುಷನೆನಿಪ ರಾಮನ । ಚರಿತೆಯನ್ನೊ ಡಗೊಂಡು ಪೇಳುವೆ । ಮರುತ ಸುತ ವಿಜಯವಿದು ಧರೆ ಯೊಳು ಮಂಗಳಪ್ರದವೂ ॥

ಶ್ರೀರಾಮನ ಜನನ, ಬಾಲ್ಯಗಳಂತೆಯೇ, ಮರುತ ಸುತನ ಜನನವನ್ನೂ ಬಾಲಲೀಲೆಯನ್ನೂ ಬಾಯ್ತುಂಬ ಹೊಗಳಿದಾಗ.

ಕಾವ್ಯವು ಪಂಡಿತಪಾಮರ ರಂಜನೀಯವಾಗಿ, ಸರಳವಾದ ಶೈಲಿಯಲ್ಲಿ ಭಕ್ತಿಪ್ರಾಧಾನ್ಯವಾಗಿ ರಚಿಸಲ್ಪ ಟ್ಟಿದೆ. ಕವಿಯು ತಾನು ಹೇಳಿರುವಂತೆ ಉದ್ದಾಮ ಪಂಡಿತನಲ್ಲದಿರಬಹುದು.

ಓದಿದವ ನಾನಲ್ಲ ಸಂಸ್ಕೃತ । ವಾದ ಕಾವ್ಯಂ ಗಳನು, ವದಕನು । ವಾದ ಛಂದಸು ಶಬ್ದಾಲಂಕೃತಿ ತರ್ಕ ಮೊದಲಾಗಿ ॥

ಆದರೆ,

ಓದಿಹೆನು ಗುರುಮುಖದಿ ಕೇಳಿರಿ । ವೇದಶಾಸ್ತ್ರ ಪ್ರಮಾಣವೆಂದೇ । ಯಾದಿ ಪುರುಷನು ರಾಮನೆಂದಿದ ಪಠಿಸೆ ನಿಶ್ಚೈಸಿ ॥

ಆ ದಯಾಂಬುಧಿ ಯನ್ನ ಹೃದಯದ । ಲಾದರದಿ ತಾ ನಿಂದು ಪ್ರೇರಿಸಿ । ಮೋದದಿಂ ತನ್ನಯ ಚರಿತ್ರೆಯ ತಾನೆ ನುಡಿಸುವನು ॥ ಎಂದು ನಮ್ರತೆಯನ್ನು ಬೀರು ತ್ತಾನೆ.

ಕಾವ್ಯವು ಪಾಂಡಿತ್ಯ ಪ್ರಧಾನವೆನಿಸದಿರಬಹುದಾ ದರೂ ಕನ್ನಡನುಡಿಸಿರಿಯ ಕಿರೀಟಮಣಿಗಳ ಸಮುದಾಯ ದಲ್ಲಿ ಶಾಶ್ವತ ಸ್ಥಾನವನ್ನು ಪಡೆಯತಕ್ಕುದಾಗಿದೆ.

ಗ್ರಂಥದ ಮಾತೃಕೆಯು ಹಿರಿಯೂರು ತಾಲ್ಲೂಕು ಕಂದಿಕೆರೆಯ ಗ್ರಾಮನಿವಾಸಿ ದುರ್ಗದ ಗಂಗಮ್ಮನವರ ಮನೆಯಲ್ಲಿ ಬಹಳ ದಿನದಿಂದಲೂ ಪೂಜಾಸ್ಥಾನದಲ್ಲಿ ದ್ದಿತು. ಹೊರಗಿನವರು ನೋಡಲೂ ಅವಕಾಶವಿರಲಿಲ್ಲ. ಇತ್ತೀಚೆಗೆ ಆ ಮಾತೃಕೆಯನ್ನು ಶ್ರೀ ಸಣ್ಣಕ್ಕೆಪ್ಪನವರ ಮಗ ಮೂಡಲಪ್ಪನವರು, ಅತ್ಯಂತ ಭಕ್ತಿಶ್ರದ್ಧೆಗಳಿಂದ ನಕಲು ಮಾಡಿ ಬರೆದಿರುತ್ತಾರೆ. ಅವರ ಶ್ರಮವು ಸಾರ್ಥಕವಾದುದು. ನಕಲು ಮಾಡುವುದರಲ್ಲಿ ಅಲ್ಲಲ್ಲಿ ಲೋಪದೋಷಗಳಿದ್ದರೂ, ಕಾವ್ಯವು ಸರಳವಾಗಿರುವುದ ರಿಂದ, ಸುಲಭವಾಗಿ ತಿದ್ದಬಹುದಾಗಿದೆ.

ಈ ಬೃಹತ್ಕಾವ್ಯವು ಕನ್ನಡಿಗರ ನೆರವಿನಿಂದ, ಅಚ್ಚಾಗಿ ಮನೆಮನೆಯಲ್ಲಿಯೂ ಪಠನೆಗೆ ಅನುಕೂಲವಾ ದಲ್ಲಿ ಕನ್ನಡ ಸಾಹಿತ್ಯಭಂಡಾರಕ್ಕೆ ಅಮೂಲ್ಯ ರತ್ನಲಾಭ ವಾಗುವುದರಲ್ಲಿ ಸಂದೇಹವಿಲ್ಲ.

ಈ ಗ್ರಂಥವನ್ನು ಬಹುಶ್ರಮದಿಂದ, ನನಗೆ ತರಿಸಿ ಕೊಟ್ಟು ಗ್ರಂಥಾವಲೋಕನಕ್ಕೆ ನೆರವಾದ ಶ್ರೀ ಕಂದಿಕೆರೆ ರಂಗಸ್ವಾಮಿಯವರಿಗೆ ನಾನು ಕೃತಜ್ಞನಾಗಿದೇನೆ.

# ಸಾವನ್ನೆದುರಿಸಿದ ಸತ್ಯ!

ಶ್ರೀ ಚಿದಂಬರ ಕಾಶೀನಾಥಜೋಶಿ,
ಲಿಂಗರಾಜ ಮಹಾ ವಿದ್ಯಾನಿಲಯ, ಬೆಳಗಾಂವಿ.

"ತೇಜಸ್ವಿನಃ ಸುಖಮಸೂನಪಿ ಸಂತ್ಯಜಂತಿ
ಸತ್ಯವ್ರತ ವ್ಯಸನಿನೋ ನ ಪುನಃ ಪ್ರತಿಜ್ಞಾಮ್ ॥

ಅದು ಸತ್ಯಯುಗ! ನಮ್ಮ ಕನ್ನಡ ನಾಡಿನಲ್ಲಿನ ಒಂದು ಗುಡ್ಡ; ಗುಡ್ಡದೊಂದಿಗೆ ಹರಿದುದೊಂದು ಹೊಳೆ. ಹೊಳೆಯ ಒಂದು ಬದಿಯಲ್ಲಿ ಗುಡ್ಡದ ಕಡೆಗೆ ಒಂದು ಹಟ್ಟಿ. ಹಟ್ಟಿಕಾರನು ಹೊಳೆಯ ಆಚೆಗಿರುವ ಹಳ್ಳಿಯವನಾದರೂ ಹಟ್ಟಿಯೇ ಆತನ ಇಂದ್ರಭವನ. ತುರುಮಂದೆಯೇ ಅವನ ಪ್ರೀತಿಯ ಬಂಧು–ಬಳಗ. ಅದೇ ಅವನ (ಗೋ) ಧನಸಂಪತ್ತು. ಗುಡ್ಡವೇ ಗೋವರ್ಧನಗಿರಿ. ಗುಡ್ಡದ ಮೇಲೆ ಹರಡಿದ ಹುಲ್ಲುಗಾವುಲವೆ ಕುಂಜವನ. ಗೋಪಾಲನೆಯೇ ಅವನ ಜೀವನದ ಗುರಿ; ಪ್ರತಿನಿತ್ಯದ ಕಾಯಕ. ಅದರಲ್ಲಿಯೇ ಮೈಮರೆವ; ಆನಂದಿಸುವ. ಹಳ್ಳಿ ಹಾಳಾಗಲಿ, ದಿಳ್ಳಿ ಪಟ್ಟಣವಾಗಲಿ; ಅವನ ಆನಂದ ಸಾಗರಕ್ಕೆ ಏರಿಳಿತಗಳಿಲ್ಲ. ಜಗತ್ತಿನ ಎಲ್ಲ ದ್ವಂದ್ವಗಳಿಂದಲೂ ಹೊರಗಿನವ. ಒಟ್ಟಿಗೆ ಅವನೊಬ್ಬ ನಿಜವಾದ ಗೋಸೇವಕ! ಕಡು ಕರ್ಮಯೋಗಿ!

ದಿನಾಲು ಬೆಳಗು ಮುಂಜಾವಿನಲ್ಲಿ ರಶ್ಮಿ ಹರಿಯುವಾಗ ಎದ್ದು, ಅವನು ಹೊಳೆಯ ನೀರಿನಲ್ಲಿ ಹಸನಾಗಿ ಜಳಕಮಾಡಿ, ಮಡಿಬಟ್ಟೆಯನ್ನುಟ್ಟು, ಬುಟ್ಟಿಯ ಗಂಟೆನೊಂದಿಗೆ ಹಿಂಡು ಹೊಡೆದುಕೊಂಡು ಗುಡ್ಡಹತ್ತುವ. ಕಾವಲಿನಲ್ಲಿನ ಹಚ್ಚಗಿನ ಎಳಹುಲ್ಲನ್ನು ಮನದಣಿಯ ಮೇಯಿಸುವ; ಹೊಳೆಯ ಸಿಹಿಯಾದ ತಿಳಿನೀರನ್ನು ಕುಡಿಸುವ. ಬಿಸಿಲಿನ ಬಾಧೆಯಾಗದಂತೆ ದಟ್ಟಾದ ನೆಳಲುಳ್ಳ ಮರದಡಿಯಲ್ಲಿ ತರುಬುವ. ಇಂಪಾಗಿ ಕೊಳಲನ್ನೂದಿ ಆನಂದಗೊಳಿಸುವ. ಗಂಗೆ, ಗೌರಿ, ಎಂಬ ಅಂಕಿತನಾಮುಗಳಿಂದ ಸಂಬೋಧಿಸುವ. ಅವನ ಇನಿದನಿ ಆಲಿಸಿದೊಡನೆ ಅವು ಮೋರೆ ಮೇಲೆ ಮಾಡುವವು; ಕಿವಿಯೊಡ್ಡಿ ಕೇಳುವವು. 'ಅಂಬಾ' ಎಂದು ಒದರುತ್ತ ಬಾಲ ಚಿಮುಕಿಸಿ, ಓಡಿಬಂದು ಹತ್ತರ ನಿಲ್ಲುವವು. ವಾತ್ಸಲ್ಯದಿಂದ ಮೈದಡವುವವು. ದುಂಡದಾದ ಉಲ್ಲಸಿತವಾದ ಆ ಹಸುಗಳನ್ನು ಕಂಡು ಅವನು ತುಂಬ ಆನಂದಿಸುವ, ಹಾಲು ಕರೆದು ಮನದಣಿಯ ಕುಡಿದು ಹಸಿವು ನೀಗುವ. ಹಗಲೆಲ್ಲ ಚಿನ್ನಾಟದೊಂದಿಗೆ ಮೇಯಿಸಿ, ಸಂಜೆಯಾಗುತ್ತಲೇ ದೊಡ್ಡಿಗೆ ಹಿಂಡನ್ನು ಹೊರಳಿಸುವ. ಹಸುಗಳು ತಮ್ಮ ಬರವನ್ನು ಹಟ್ಟಿಯೊಳಗಿನ ತಮ್ಮ ಮುದ್ದು ಕರು–ಮರಿಗಳಿಗೆ ಸೂಚಿಸಲು ಕೊರಳೊಳಗಿನ ಗಂಟೆಗಳನ್ನು ಅಲುಗಿಸಿ ಆಗಾಗ 'ಅಂಬಾ' ಎಂದು ಕೂಗುತ್ತ ಆನಂದದಿಂದ ಚಿಮ್ಮುತ್ತ ನೆಗೆಯುತ್ತ ಬಂದು ಹಾಲುಣಿಸುವವು. ಕರುಗಳೂ ಹೊಟ್ಟೆತುಂಬ ಹಾಲುಂಡು ದುಂಡಗಾಗಿ ಉಲ್ಲಾಸದಿಂದ ನೆಗೆದಾಡುತ್ತಿದ್ದುವು. ಹೀಗಾಗಿ ಗೋವುಗಳ ಹಿಂಡು ದಿನದಿನಕ್ಕೆ ಬೆಳಗೆಯಲ್ಲಿತ್ತು.

ಗುಡ್ಡದ ಮೇಲೆ ಹರಡಿದುದು ಅಂತಹ ಕಟ್ಟಡವಿಯಲ್ಲದಿದ್ದರೂ ಅಲ್ಲಿ ಮನುಷ್ಯ ಸಂಚಾರವಿರಲಿಲ್ಲ. ಯಾವಾಗಲೂ ಗಂಭೀರವಾದ ಶಾಂತತೆಯು ಅವಿತುಕೊಂಡಿರುತಿತ್ತು. ಬಿಟ್ಟುಬಿಡದೆ 'ಜಿಯ್' ಎಂದು ಅರಚುವ ಅಡವಿಯ ಹುಳುಗಳ ಕರ್ಣಕಠೋರವಾದ ಧ್ವನಿಯೂ ಆವಾಗಲೊಮ್ಮೆ 'ಟಿಟಿಟಿವ್' ಎಂದು ಕೂಗುವ ಟಿಟ್ಟಿವ್ವ ಪಕ್ಷಿಗಳ ಕೂಗೂ ನೆಲಸಿದ ಶಾಂತತೆಯನ್ನು ತುಸುಮಟ್ಟಿಗೆ ಚದುರಿಸುತ್ತಿದ್ದುವಲ್ಲದೆ ನಿಸರ್ಗಜನ್ಯವಾದ ಭಯಾನಕತೆಯನ್ನು ಹೆಚ್ಚಿಸುತಲಿದ್ದುವು. ಒಂದು ದಿನ ಇಳಿ ಹೊತ್ತಿನಲ್ಲಿ ಗಾಳಿಯ ತೆರೆಗಳೊಂದಿಗೆ ಸಾಗಿಬರುವ ಕೊಳಲಿನ ಇಂಪಾದ ದನಿಯನ್ನು ಆಲಿಸುತ್ತ, ಬಾಲ ಅಲ್ಲಾಡಿಸುತ್ತ, ಮೆಲುಕು ಹಾಕುತ್ತ ತುರುಮಂದೆಯು ವಾಡಿಕೆಯಂತೆ ಮೈಮರೆತು ಮೇಯುತಲಿತ್ತು. ಆಗ ಒಮ್ಮಿಂದೊಮ್ಮೆ ಗುಡ್ಡವೇ ಮಾರ್ದನಿಗೊಳ್ಳುವಂತೆ ಮುಂಗಾರಿಯ ಗುಡುಗಿನಂತಹ ಪ್ರಚಂಡವಾದ ಗರ್ಜನೆಯುಂಟಾಯಿತು. ಇಂತಹ ಗಂಭೀರ ಗರ್ಜನೆಯನ್ನು ಎಂದೂ ಕೇಳದಿದ್ದ ಆ ಗೋವೃಂದವು ಒಮ್ಮೆಲೇ ಬೆದರಿ, ಹೌಹಾರಿ ಬಾಲವನ್ನು ತಲೆಯಮೇಲಿರಿಸಿ, ಕಲ್ಲು, ಮುಳ್ಳು, ತಗ್ಗು–ಮುಗ್ಗು ಲೆಕ್ಕಿಸದೆ ವಾಯುವೇಗದಿಂದ ಒಡೆಯನ ಬಳಿಗೆ ಓಡಿಬಂತು. ಕೊಳಲಗಾನದಲ್ಲಿ ಮೈಮರೆತ ತುರುಗಾಹಿಯು ಎಚ್ಚೆತ್ತು ಗಾಬರಿಗೊಂಡು ಲಗುಬಗೆಯಿಂದ ಹಿಂಡನ್ನೆಲ್ಲ ದೊಡ್ಡಿಗೆ ತಿರುವಿದನು. ದೊಡ್ಡಿಗೆ ಮುಟ್ಟಿದಾಗ ಮಾತ್ರ ಆತನ

ಜೀವದಲ್ಲಿ ಜೀವನ ಬಂದಂತಾಯಿತು. ತುರುಮಂದೆ ಯಾದರೂ ಜೀವದಿಂದ ಪಾರಾದೆವೆಂತಲೂ ಹಾಯಾಗಿ ನಿಟ್ಟುಸಿರಿಟ್ಟಿತು. ಆದರೆ ಅದೇ ವೇಳೆಗೆ ಆ ಹಿಂಡಿನೊಳಗಿನ ಗೋವೊಂದು ತನ್ನ ಜೀವನವನ್ನು ಮೃತ್ಯುವಿನ ದವಡೆಯಲ್ಲಿ ಸಿಲುಕಿಸಿಕೊಂಡು ನಿರಾಶೆಯಿಂದ ನಿಟ್ಟುಸಿರಿಡುತ್ತಲಿತ್ತು.

೨

ಎಂದಿಲ್ಲೊಮ್ಮೆ ಒಂದು ದೊಡ್ಡ ಹುಲಿಯು ದಾರಿ ತಪ್ಪಿ ಆಕಸ್ಮಾತ್ತಾಗಿ ಆ ಗುಡ್ಡಕ್ಕೆ ಬಂದಿತ್ತು. ಅದನ್ನು ಗೊಲ್ಲನು ಅರಿತಿರಲಿಲ್ಲ. ಅಲ್ಲದೆ ಅಂತಹ ಘನಗರ್ಜನೆಯನ್ನೂ ಕೇಳಿರಲಿಲ್ಲ. ಆದಾಗ್ಗೂ ತನ್ನ ಹಿಂಡಿಗೆ ಅಡವಿಯ ಕ್ರೂರಮೃಗಗಳ ಬಾಧೆಯಾಗದಂತೆ ಎಚ್ಚರಪಡುತ್ತಿದ್ದ. ಅಂತೇ ಗುಡುಗು ಕೇಳಿದೊಡನೆ ಹಿಂಡು ತಿರುವಿದ. ಗಾಬರಿಗೊಂಡ ಮೂಲಕ ಒಂದು ಗೋವು ಹಿಂಡನ್ನಗಲಿ ಹಿಂದುಳಿದುದು ಅವನ ಲಕ್ಷ್ಯಕ್ಕೆ ಬಂದಿರಲಿಲ್ಲ. ಗುಡ್ಡದ ಮೇಲಿನ ತಗ್ಗುಪ್ರದೇಶದಲ್ಲಿ ಹಸಿವೆಯಿಂದ ಬಳಲುತ್ತ ಬಂಡೆಯ ಮರೆಗೆ ಬಿದ್ದುಕೊಂಡ ಹುಲಿಯನ್ನು ಕಾಣದೆ ಒಂದು ಹಸುವು ಎಳೆ ಹುಲ್ಲಿನಾಶೆಯಿಂದ ಮೇಯಲು ಅಲ್ಲಿಗೆ ಹೋಯಿತು. ಕೂಡಲೆ ಹುಲಿಯು 'ಅಲಲ! ಸುದೈವದಿಂದ ಹಸಿವೆಗೆ ತಕ್ಕಷ್ಟು, ತಕ್ಕಂತಹ ಆಹಾರವು ಅನಾಯಾಸವಾಗಿ ದೊರಕಿತಲ್ಲ' ಎಂದು ನೆನೆದು ಹರುಷದಿಂದ ಟಣ್ಣನೆ ಹಾರಿ ಹಸುವನ್ನು ಅಡ್ಡಗಟ್ಟಿ ನಿಂತು ಘೋರವಾಗಿ ಗರ್ಜಿಸಿತು. ಮರಣವೇ ರೂಪುಗೊಂಡು ನಿಂತಂತೆ ಹಸುವಿಗೆ ತೋರಿದ್ದರೆ ಅರಿದೇನು? ಗುಡುಗಿನಿಂದ ಅದರ ಕೈಕಾಲೇ ಹೋದವು. ಅದು ಗದಗದನೆ ನಡುಗಿತು. ಮೋರೆಯನ್ನು ಮೇಲಕ್ಕೆತ್ತಿ ಧಾರೆಯಾಗಿ ಕಣ್ಣೀರು ಸುರಿಸತೊಡಗಿತು.

**ಹುಲಿ :**—ಅಮ್ಮಾ, ಸುಳ್ಳೇ ಏಕೆ ಅಳುವೆ? ಇನ್ನು ಅತ್ತರೇನಾಗುವದು? "ಗತಂ ನ ಶೋಚ್ಯಂ" ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು? ಮೃತ್ಯುವಿನ ದವಡೆಗೆ ನೀನಾಗಿ ಬಂದಿರುವಿ. ಇದು ನಿನ್ನ ತಪ್ಪಲ್ಲವೇ?

**ಆಕಳು :**—(ಅಳುವನ್ನು ತಡೆದು) ಅಹುದಪ್ಪ, ಇದು ನನ್ನದೇ ತಪ್ಪು. ಒಳ್ಳೆತ್ತಾದ ಎಳೆ ಹುಲ್ಲು ಸಾಕಷ್ಟು ತಿಂದು, ಗಡಸಾದ ಹೆಚ್ಚು ಹಾಲು ಕರೆದು, ಒಡೆಯನನ್ನೂ ಮಮತೆಯ ಮಗುವನ್ನೂ ಸಂತುಷ್ಟಿಯೊಡನೆ ಪುಷ್ಟಿಗೊಳಿಸಬೇಕೆಂದು ನನ್ನ ಹೆಬ್ಬಯಕೆ. "ಕಾಮಮಿಹವೈರಿಣಂ ವಿದ್ಧಿ" ಎಂಬ ಗೀತೋಕ್ತಿಯಂತೆ ಬಯಕೆ ಎಂಬ ವೈರಿಯು ನನ್ನನ್ನು ಇಲ್ಲಿಗೆ ಕರೆತಂದಿತು. ಬಯಕೆಗೆ ಬಲಿಯಾದ ನಾನೇ ತಪ್ಪುಗಾರಳಪ್ಪ.

**ಹುಲಿ :**—ತಪ್ಪಿಗೆ ತಕ್ಕ ಶಿಕ್ಷೆಯೆಂಬುದು ನಿಸರ್ಗದ ನಿಯಮ. ಹೀಗಿದ್ದು ಮೇಲೆ ಮೋರೆ ಮಾಡಿ ಕಣ್ಣೀರಿಡುವೆಯಲ್ಲ! ಪಾಪಿಯಾದ ನನ್ನಿಂದ ಕಾಪಾಡೆಂದು ಮಹಾದೇವನಿಗೆ ಮೊರೆಯಿಡುವೆಯಾ? "ಜೀವೋ ಜೀವಸ್ಯ ಜೀವನಮ್" ಜೀವವು ಜೀವದ ಜೀವನವು. ಯಾವ ವಿಧಾತನು ನಿನ್ನನ್ನು ನಿರ್ಮಿಸಿದನೋ ಅವನೇ ನಿನ್ನನ್ನು ನನ್ನ ಆಹಾರವೆಂದು ಗೊತ್ತುಪಡಿಸಿರುವನು. ನಿನ್ನನ್ನು ತಿನ್ನುವಲ್ಲಿ ನಾನು ಪಾಪಿಯೆಂತು? ಇನ್ನು ಸಾವಿಗಾಗಿ ನಿನ್ನ ಅಳುವಿದ್ದರೆ "ಜಾತಸ್ಯ ಮರಣಂಧ್ರುವಮ್" ಹುಟ್ಟಿದವನಿಗೆ ಸಾವು ತಪ್ಪಿದ್ದಲ್ಲ. ಎಂಬ ಸಿದ್ಧಾಂತವನ್ನು ಎಲ್ಲರೂ ಮನಗಂಡಾಗ್ಗೂ ಅದು ಒದಗಿದಾಗ ಮಾತ್ರ ಎಲ್ಲರೂ ಅಳುವಂತೆ ನೀನೂ ಅಳುವಿ. ಇದು ಮೂರ್ಖತನವಲ್ಲವೆ?

**ಆಕಳು :**—ಅಣ್ಣಾ, ನಾನು ನಿನ್ನನ್ನು ಪಾಪಿಯೆನ್ನಲಾರೆ; ಅದರಂತೆ ನನ್ನ ಸಾವಿಗಾಗಿಯೂ ಅಳಲಾರೆ. ನಾನು ನನ್ನ ತಂದೆಯ-ಅನ್ನದಾತನ ಋಣದಿಂದ ಮುಕ್ತಳಾಗಿಲ್ಲ. ಅಲ್ಲದೆ ನನಗೆ ಒಬ್ಬನೇ ಒಬ್ಬ ಕಂದನು. ಅವನು ಇನ್ನೂ ಚಿಕ್ಕವ. ಅನ್ಯರನ್ನು ಅರಿಯ. ನನ್ನ ಸೊಲ್ಲು ಆಲಿಸುತ್ತ ದಾರಿ ಕಾಯುತ್ತಲಿರುವ. ಹುಲ್ಲು ಮೂಸಲಾರ. ಅರಗಳಿಗೆ ತಡವಾದರೆ ಕಳವಳಗೊಳುವ. ನಾನಿಲ್ಲದೆ ಬದಕಲಾರ. ಅದಕ್ಕಾಗಿ ನಾನೇ ಪಾಪಿಯೆಂದು ಚಿಂತಿಸುವೆ; ಕಣ್ಣೀರು ಸುರಿಸುವೆ.

**ಹುಲಿ :**—ಅಮ್ಮಾ, "ಮೊನ್ನೆ ಮದುವ್ಯಾದೆನ್ನೈ, ಕರೆವೆ ಒಂದೆರಡೆಮ್ಮೆ" ಎಂದು ಪುರಂದರದಾಸರು ಹೇಳಿರುವಂತೆ ಮೃತ್ಯುವು ಪ್ರಾಣಿಗಳ ಸುಖಾಪೇಕ್ಷೆಯನ್ನು ಲೆಕ್ಕಿಸದಂತೆ. "ನಹಿ ಪ್ರತೀಕ್ಷತೇ ಮೃತ್ಯುಃ ಕೃತಮಸ್ಯ ನ ವಾ ಕೃತಮ್" ಕರ್ತವ್ಯದ ಪೂರ್ತಿ, ಅಪೂರ್ತಿಗಳನ್ನು ಲೆಕ್ಕಿಸಲಾರದು. ಅದರ ಕರೆಗೆ ಎಲ್ಲರೂ ಕೂಡಲೇ ಓಗೊಡಬೇಕಾಗುವುದೆಂಬುದನ್ನು ತಿಳಿದವಳಾದ ನಿನಗೆ ಹೇಳಬೇಕೇ? ಅಲ್ಲದೆ ಪ್ರಾಣಿಗಳಿಗೆ ವಿಧಾತನು ಎಷ್ಟೇ ಪ್ರದೀರ್ಘವಾದ ಆಯುರ್ದಾಯವನ್ನು ದಯಪಾಲಿಸಿದರೂ ಕೂಡ ತನ್ನ ಕರ್ತವ್ಯವು ಪೂರ್ತಿಗೊಂಡಿತೆಂದು ಈವರೆಗೂ ಯಾರೂ ಹೇಳಿಲ್ಲ; ಹೇಳುವುದನ್ನು ಕೇಳಿಲ್ಲ. ತಾಯಿ ನೀನು ಹೇಳುವುದೆಲ್ಲ ಕ್ಷುದ್ರವೂ ಕ್ಷಣಭಂಗುರವೂ ಆದ ಜೀವ

ದಾಶೆಗಾಗಿ ಎಂಬುದರಲ್ಲೇನೂ ಸಂದೇಹವಿಲ್ಲ. ಇನ್ನು ಹಸಿವೆಯ ಬಾಧೆಯನ್ನು ತಡೆಯಲಾರೆ ನಿನ್ನ ಪ್ರಾಣಗಳನ್ನು ಹೀರಿ ನನ್ನ ಪಂಚಪ್ರಾಣಗಳನ್ನು ತೃಪ್ತಿಗೊಳಿಸುವೆ."

**ಆಕಳು :—** ಮಗುವೆ, ನನ್ನ ವಿನತಿಯೊಂದನ್ನು ಮನ್ನಿಸು. ಕೈಮುಗಿವೆ, ಕಡೆಗಣಿಸಬೇಡ.

**ಹುಲಿ :—** ಅದೇನು ಬೇಗ ಹೇಳು.

**ಆಕಳು :—** ಒಡೆಯನ ಋಣ ತೀರಿಸಲು ಎಷ್ಟೇ ಜನ್ಮ ತಾಳಬೇಕಾಗಿ ಬಂದರೂ ಸಂತೋಷಿಸುವೆ; ಜನ್ಮ ತಾಳಿ ತೀರಿಸುವೆ. ಅದರಂತೆ ಮಮತೆಯ ಸಾಕು ತಂದೆಯೂ ದಯಾಘನನಾದ ಜಗದೊಡೆಯನೂ ನನ್ನ ಕರುವನ್ನು ಕಾಪಾಡಲು ಸಮರ್ಥರಾಗಿರುವರೆಂಬ ವಿಶ್ವಾಸವೂ ನನಗಿದೆ. ನನ್ನ ಬಲಿದಾನದಿಂದ ನಿನ್ನ ಪಂಚಪ್ರಾಣಗಳು ತೃಪ್ತಿಗೊಳತಿದ್ದರೆ ನನಗೆ ಮಿತಿಮೀರಿದ ಆನಂದವಿದೆ. "ಪರೋಪಕಾರಾರ್ಥಮಿದಂ ಶರೀರಂ" ಪರೋಪಕಾರಕ್ಕಾಗಿಯೆ ಈ ಶರೀರವೆಂಬುದನ್ನು ಅರಿತಿರುವೆ. ಆದರೆ ಪ್ರಸ್ತುತ ಕರ್ತವ್ಯದ ಕರೆಗೆ ನಾನು ಓಗೊಡಬೇಕಾಗಿದೆ. ಅದಕ್ಕಾಗಿ ನಿನ್ನ ಹಸಿವೆಯ ಬಾಧೆಯನ್ನು ಅಲ್ಪಕಾಲ ತಡೆಯಲಾರೆಯಾ?

**ಹುಲಿ :—** ಅದಾವುದು ನಿನ್ನ ಕರ್ತವ್ಯದ ಕರೆ? ಸಾವು ತಪ್ಪಿಸುವದನ್ನು ಬಿಟ್ಟು ಹೇಳು.

**ಆಕಳು :—** ಮಗು, ಸಾವು ತಪ್ಪಿಸುವಂಥ ಕೀಳು ಕರ್ತವ್ಯವನ್ನು ಮುಂದು ಮಾಡುವ ಹೇಡಿಯು– ಜೀವಗಳ್ಳಳು–ನಾನಲ್ಲ. ಈಶ ಸಂಕಲ್ಪದಂತೆ ಅದು ಒದಗಿಯೇ ಬಂದಿದ್ದರೆ ಬರಲಿ. ಸ್ವಾಗತವಿದೆ. ಅದಕ್ಕೆ ನಾನು ಆನಂದದಿಂದ ತಲೆಬಾಗುವೆ. ಆದರೆ ಕಂದಾ, ನನ್ನ ಪ್ರೀತಿಯ ಕಂದನು—ನಿನ್ನ ತಮ್ಮನು ಇಷ್ಟೊತ್ತಿಗೆ ನಿನ್ನಂತೆಯೇ ಹಸಿದಿದ್ದಾನು. ಮೊಲೆಯುಣಿಸುವ ವೇಳೆಯಾಗಿದೆ. ಈಗಲೆ ಹೋಗಿ ಉಣಿಸಿ, ಚನ್ನಾಗಿ ಬುದ್ಧಿಗಲಿಸಿ ಅವನನ್ನು ನನ್ನ ಭಗಿನಿಯರಿಗೊಪ್ಪಿಸಿ ಮರಳಿ ತಪ್ಪದೆ ಬೇಗ ಬರುವೆ. ನಿನ್ನಂತೆಯೇ ಅತನ ಹಸಿವೆಯೆಂದು ಬಗೆದು ಅಪ್ಪಣೆ ಕೊಡು. ನೀನು ಪ್ರೌಢನು. ಹಸಿವೆಯನ್ನು ಕೆಲಹೊತ್ತು ತಡೆಯಬಹುದು. ಆದರೆ ನಿನ್ನ ತಮ್ಮನು ತೀರ ಚಿಕ್ಕವ. ಅರಗಳಿಗೆ ಕೂಡ ತಡೆಯಲಾರ. ಇಂದು ಈ ಶರೀರವನ್ನು ನಿನಗೊಪ್ಪಿಸಿದೆ. ಸುಳ್ಳುಹೇಳಲಾರೆ; ಬಡಿವೆಯ ಬಿನ್ನಹವನ್ನು ಮನ್ನಿಸು.

**ಹುಲಿ :—** ಅಮ್ಮಾ, ಅದೆಲ್ಲವೂ ಸರಿ. ಆದರೆ ಈ ಮಾತು ಹೇಳಲಿಕ್ಕೆ ಹಗುರಾಗಿದ್ದಷ್ಟೇ ಆಚರಿಸಲು ಬಿಗಿಯಾಗಿದೆ. ಸ್ನೇಹ ಪಾಶವು ಬಲವಾಗಿದೆ. ಅದರಲ್ಲಿಯೂ ದೇಹಸ್ನೇಹ— ಅಪತ್ಯಸ್ನೇಹಗಳು ಒಂದರಿಂದೊಂದು ಮಿಗಿಲಾಗಿವೆ. ಅವನ್ನೂ ತುಂಡರಿಸುವುದು ಎಂತೆಂತಹ ವಾತಾಂಬುಪರ್ಣಾಶಿಗಳಾದ ತಪಸ್ವಿ, ಜ್ಞಾನಿಗಳಿಗೂ ಕೂಡ ಬಿಗಿಯಾಗಿರುವಾಗ ನಿನ್ನಂತಹಳ ಪಾಡೇನು? ಅಮ್ಮಾ, ಧೇನುಮಾತೆ, ಹುಸಿಯಾಡಿ ಸಾವು ತಪ್ಪಿಸಲು ಯತ್ನಿಸಬೇಡ. ನಿನ್ನ ಮರುಕದ ಮಾತಿಗೆ ಮರುಳಾಗಲಾರೆ.

**ಆಕಳು :—** ಅಣ್ಣಾ, ಅಣ್ಣಾ, ತಾಯಿಯಾದ ಭೂದೇವಿಯನ್ನೂ ತಂದೆಯಾದ ಪರಮೇಶ್ವರನನ್ನೂ ಸ್ಮರಿಸಿ, ಮರಳಿ ತಪ್ಪದೆ ಬರುವೆನೆಂದು ಸತ್ಯವಾಗಿ ಹೇಳುವೆ. ಇದು ಸತ್ಯ ಪ್ರತಿಜ್ಞೆ. ಸತ್ಯವೆ ತಂದೆ, ಸತ್ಯವೆ ತಾಯಿ, ಸತ್ಯವೆ ಬಂಧುಬಳಗವೆಂದು ನಾನು ಬಗೆದಿರುವೆ. "ಸತ್ಯದಿಂದಲೆ ಜಗದ ಸಂಸ್ಥಿತಿ, ಸತ್ಯದಿಂದಲೆ ಜೀವ ಸಂಸ್ಥಿತಿ, ಸತ್ಯದಿಂದಲೆ ಧರ್ಮ ಸಂಸ್ಥಿತಿ-ಮೋಕ್ಷ ಸಂಸ್ಥಾನ" ಎಂತಲೂ "ಸತ್ಯವ್ರತಿಗಳಾದ ತೇಜಸ್ವಿಗಳು ಸುಖದಿಂದ ಮರಣವನ್ನಪ್ಪುವರೆ ಹೊರತು ಪ್ರತಿಜ್ಞೆಯನ್ನು ಮುರಿಯಲಾರರು" ಎಂತಲೂ ಕವಿಗಳು ಹೇಳಿರುವರು. ಸತ್ಯಸಂಧರಾದ ಹರಿಶ್ಚಂದ್ರ, ಯುಧಿಷ್ಠಿರ, ದಶರಥ, ರಾಮ, ಬಲಿ, ಶಿಬಿ, ದಧೀಚಿ, ನಲ, ವಿಂಧ್ಯೆ ಮೊದಲಾದ ಮಹಾತ್ಮರು ಕೀರ್ತಿಶೇಷರಾಗಿ ಅಮರರಾಗಿದ್ದಾರೆ. ಅಸತ್ಯಕ್ಕೆ ದೇವನು ಮೆಚ್ಚಲಾರ. ಅಪ್ಪಾ, ಕೃಪೆಮಾಡು. ಅಪ್ಪಣೆ ಕೊಡು.

೩

ಹುಲಿರಾಯನು ಗೋಮಾತೆಯ ಕಿವಿಗೆ ಮನಸೋತು "ಒಳ್ಳೇದು, ಹೋಗಿಬಾ," ಎಂದು ನುಡಿಯುತ್ತ ತನ್ನ ದೊಡ್ಡ ತಲೆಯನ್ನು ಅಲ್ಲಾಡಿಸುವುದೊಂದೆ ತಡ. ಆಕಳು ಹಟ್ಟಿಯ ದಿಕ್ಕಿಗೆ ಮೊಗ ತಿರುವಿತು. ಪುತ್ರವಾತ್ಸಲ್ಯವು ಉಕ್ಕೇರಿ ಅಂಬಾ, ಎಂದು ಒರಲುತ್ತ ಒಲಿಮೆಯ ಕಂದನನ್ನು ಯಾವಾಗ ಕಾಣುವೆನೋ ಎಂಬ ಹಂಬಲದಿಂದ ಕಗ್ಗತ್ತಲಲ್ಲಿ ಗುಡ್ಡದ ತೆಗ್ಗುತೆವರುಗಳಲ್ಲಿ ಮುಗ್ಗರಿಸುತ್ತ ಹಟ್ಟಿಗೆ ಓಡಿಬಂತು. ನಿತಾಂತ ಸ್ನೇಹವು ಪಾಪವನ್ನೇ ಶಂಕಿಸುವದು. ಹಲವಾರು ಕೆಟ್ಟ ಕಲ್ಪನೆಗಳಿಂದ ಬೆಂದು ಬೆಂಡಾಗಿ, ತಾಯಿಯ ಬರವನ್ನೇ ಕಾಯ್ದು ಕುಳಿತ ಕರುವು ಅವಳ ಉಳುಹಿನಿಂದ ಚೇತರಿಸಿ ಅತ್ಯಾನಂದದಿಂದ ಬಾಲನೆಗಹಿ, ಪುಟನೆಗೆದು

ನಿಂತು ಪ್ರೇಮನಿಧಿಯಾದ ಅಮ್ಮನ ಮೋರೆಗೆ ಮೋರೆ ದಡವಿತು.

**ಕರು :**—ಅಮ್ಮಾ, ಇಂದು ಇಷ್ಟೇಕೆ ತಡ? ಎಲ್ಲರನ್ನಗಲಿ ಹಿಂದೇಕೆ ಉಳಿದೆ? ಯಾವದೊಂದು ಆಪತ್ತು ಅಡ್ಡಾಯಿತೇ?

ಎವೆಗಳನ್ನೊತ್ತಿ ಧಾರೆಯಾಗಿ ಹರಿವ ತಾಯಿಯ ಕಣ್ಣೀರು ಕಂಡೊಡನೆ ಅದರ ಆನಂದವು ಮಾಯವಾಯಿತು. ಗಾಬರಿಯಾಗಿ ಕಾತರಸ್ವರದಿಂದ ಮತ್ತೆ ಕೇಳಿತು.

**ಕರು :**—ಅಮ್ಮಯ್ಯ, ಅದೇಕೆ, ಕಣ್ಣೀರು ಹಾಕುವೆಯಲ್ಲ? ತಲೆನೋಯುವುದೆ? ಜಾಡ್ಯವೆ, ಏನಾಗಿದೆ?

**ಹಸು :**— (ವಾತ್ಸಲ್ಯಾತಿಶಯದಿಂದ ಮಗುವಿನ ಮೈನೆಕ್ಕುತ್ತ) ಕಂದಾ, ನನಗೇನೂ ಬೇನೆಯಿಲ್ಲ. ಆಪತ್ತು ಅಡ್ಡಗಟ್ಟಿತ್ತು. ಮೃತ್ಯುವೇ ಎದುರಾಗಿತ್ತು. ಹುಲಿರಾಯನ ಕೈಯಲ್ಲಿ ಸಿಲುಕಿದ್ದೆ!

**ಕರು :**—ಅಬ್ಬಾ! ಹಾಗಾದರೆ, ಅಮ್ಮಾ, ಹೇಗೆ ಪಾರಾಗಿಬಂದೆ? ಬಂದಮೇಲೆ ಮತ್ತೆ ಕಣ್ಣೀರಿಡುವುದೇಕೆ?

**ಹಸು :**— ಮಗು, ನಾನು ಮೃತ್ಯುವಿನಿಂದ ಪಾರಾಗಿ ಬಂದಿಲ್ಲ. ಕಾಲಪಾಶವು ಇನ್ನೂ ನನ್ನ ಕೊರಳಿಗೆ ಬಿಗಿದೇ ಇದೆ. ಆದರೆ ಅಪಾರವಾದ ಅಪತ್ಯಸ್ನೇಹವು-ನಿನ್ನ ಮೇಲಿನ ಕಡುಮಮತೆಯು ನನ್ನನ್ನು ಇಲ್ಲಿಗೆ ಎಳತಂದಿತು.

**ಕರು :**—ಅಮ್ಮಾ, ನಿನ್ನ ಮಾತಿನ ಅರ್ಥವೇ ನನಗಾಗದು. ಈಗಲಂತೂ ಮೃತ್ಯುವನ್ನು ತಪ್ಪಿಸಿ ಬಂದಿರುವಿಯಷ್ಟೆ? ಮತ್ತೇಕೆ ಕಣ್ಣೀರು?

**ಹಸು :**—ನನ್ನ ಮುದ್ದು ಮಗುವೆ, ಹಸಿದಿರುವಿ, ಮೊದಲು ಮೊಲೆಯುಣ್ಣು. ನನ್ನ ಸಾವಿಗಾಗಿ ನಾನು ಅಳುತ್ತಿಲ್ಲ. ಇದೇ ನಿನ್ನ ಕೊನೆಯ ಬೆಟ್ಟಿಯೆಂದು ಅಳುವೆ; ನಿನಗಾಗಿ ಕಣ್ಣೀರಿಡುವೆ. ಕೊನೆಗೊಮ್ಮೆ ನಿನ್ನ ಕಂಡು, ಮೊಲೆಗೊಟ್ಟು, ಹೋಗಬೇಕೆಂದು ಹುಲಿರಾಯನಿಗೆ ಮರಳಿ ಬರುವ ವಚನಕೊಟ್ಟು ಬಂದಿರುವೆ.

**ಕರು :**—ಅಮ್ಮಾ, ನನ್ನನ್ನು ಪರದೇಶಿಯಾಗಿ ಮಾಡಿ, ಸಾಯಲು ನೀನು ಅಲ್ಲಿಗೆ ಮರಳಿ ಹೋಗಲೇ ಬೇಡ. ಇನ್ನು ಆ ಹುಲಿರಾಯನು ಮಾಡುವುದೇನು?

**ಹಸು :**—ಹಾಗಲ್ಲ ಮಗು, ಆತನ ಉಪಕಾರಕ್ಕಾಗಿ ನಾನು ಕೃತಜ್ಞಳಾಗಿರಲೇ ಬೇಕು. ಕೊಟ್ಟ ವಚನಕ್ಕೆ ತಪ್ಪಲಾರೆ; ಸತ್ಯವನ್ನು ತಳ್ಳಲಾರೆ. "ಸತ್ಯಾನ್ನಾಸ್ತಿಪರೋಧರ್ಮಃ" ಸತ್ಯಕ್ಕಿಂತ ಹೆಚ್ಚಿನ ಧರ್ಮವಿಲ್ಲ. ಅಧರ್ಮವಾಚರಿಸಿ ಈಗ ಜೀವದಿಂದುಳಿದಾಗ್ಗೂ ಕೊನೆಗೊಮ್ಮೆ ಸಾವಿಗೆ ತುತ್ತಾಗಲೇಬೇಕಾಗಿ, ಪಾಪದ ಫಲವನ್ನು ಉಣ್ಣಲೇ ಬೇಕಾಗುವದು. "ಸತ್ಯವ್ರತಿಗಳಾದ ತೇಜಸ್ವಿಗಳು ಸುಖದಿಂದ ಮರಣವನ್ನಪ್ಪಿ ಸತ್ಯಪ್ರತಿಜ್ಞರಾಗುವರು" ಎಂದು ಜ್ಞಾನಿಗಳು ಹೇಳಿರುವರು. ಸತ್ಯಪ್ರತಿಜ್ಞನಾಗಿ ಸದ್ಗತಿ ಹೊಂದುವುದೆ ಪ್ರಾಣಿಗಳ ಮೇಲ್ಮೆ. ಮರಣಕ್ಕೆ ಬೆದರಿ ವಚನಭ್ರಷ್ಟರಾಗುವವರು ಕೀಳರು; ದುರ್ಗತಿಗೀಡಾಗುವರು.

**ಕರು :**—ಅಮ್ಮಾ, ಅದೆಲ್ಲ ವೇದಾಂತವೇನೊ ನಿಜವಿರಬಹುದು. ಆದರೆ ನನ್ನ ಗತಿಯೇನು? ನೀನಿಲ್ಲದೆ ಯಾರ ಮೊಲೆಯುಣ್ಣಲಿ? ಆದಾರ ಬಳಿ ಮಲಗಲಿ? ಹಿತವರಿಲ್ಲದೆ ಹೇಗೆ ಜೀವಿಸಲಿ? ನಾನೂ ನಿನ್ನೊಡನೆ ಬರುವೆ. ಮೃತ್ಯುವಿಗೆ ತುತ್ತಾಗುವೆ.

ಕರುವು ದುಃಖಾವೇಗದಿಂದ ಕಣ್ಣೀರು ಸುರಿಸಹತ್ತಿತು. ಅದನ್ನು ಕಂಡು ಹಸುವಿನ ಕುತ್ತಿಗೆಯೂ ಬಿಗಿಯಿತು. ಮಾತು ಹೊರಡದಾದವು. ಆದಾಗ್ಗೂ ಅಳುತ್ತ ಕೂಡುವ ಸಮಯವು ಇದಲ್ಲವೆಂದು ಬಗೆದು ದುಃಖವನ್ನು ನುಂಗಿಕೊಂಡು "ಕಂದಮ್ಮಾ, ಅದು ಸರಿಯಲ್ಲ. ಇಲ್ಲಿಯೇ ಇರು. ಯಾವುದಕ್ಕೂ ಚಿಂತಿಸಬೇಡ. 'ಸತ್ತವರ ಮಕ್ಕಳು ಇದ್ದವರ ಕೈಯಲ್ಲಿ' ಎಂಬಂತೆ, ಇಲ್ಲಿರುವವರೆಲ್ಲರೂ ನಿನ್ನ ಹಿತವರೆ! ಅಲ್ಲದೆ ನನಗಿಂತ ಹೆಚ್ಚು ಕಾಪಾಡುವ ಒಡೆಯನಿದ್ದಾನೆ. ದಯಾನಿಧಿಯಾದ ಪರಮಾತ್ಮನಂತೂ ಎಲ್ಲರ ಪಾಡಿಗಾಗಿ ಇರುವನು. ಅಳಬೇಡ. ಎಂದು ನುಡಿದು, ಜೊತೆಗಾತಿಯರಿಗೆ ಹೇಳಿತು! "ಅಮ್ಮಗಳಿರ, ಅಕ್ಕಗಳಿರ, ಈ ಪರದೇಶಿಯಾದ ಕರುವನ್ನು ನಿಮ್ಮ ಕಂದನೋಪಾದಿಯಲ್ಲಿ ಕಾಣಿರಿ, ಹುಲ್ಲು ತಿನ್ನುವವರೆಗೆ ಮೊಲೆಗೊಡಿರಿ. ಮುಂದೆ ಬಂದರೆ ಹಾಯಬೇಡಿ, ಹಿಂದೆಬಂದರೆ ಒದೆಯಬೇಡಿ. ಮರಣವನ್ನಪ್ಪಲು ವಚನವಿತ್ತಂತೆ ನಾನು ಈಗಲೆ ಹೋಗುವೆ. ಹೋಗುವ ಮುನ್ನ ಅನ್ನದಾತನ ಅಪ್ಪಣೆ ಹೊಂದುವದು ಪರಮ ಧರ್ಮವು. ಆದರೆ ಆದರ ಪರಿಣಾಮವು ಒಳಿತಾಗದು ನನ್ನೊಬ್ಬಳ ಸಲುವಾಗಿ ನಮ್ಮೆಲ್ಲರ ರಕ್ಷಕನನ್ನು ಸಂಕಟಕ್ಕೆ ನೂಕಿ ನಾವೆಲ್ಲ ಪರದೇಶಿಗಳಾಗುವ ಸಮಯ ಬಂದೀತು. ಅಲ್ಲವೆ ನಾನು ವಚನಭ್ರಷ್ಟಳಾಗಬೇಕಾದೀತು. ಆದ್ದರಿಂದ ನನ್ನ ಕೊನೆಯ ವಿನತಿ, ಪ್ರಣಾಮಗಳನ್ನು ನೀವೇ

ನನ್ನ ವತಿಯಿಂದ ಒಡೆಯನಿಗರ್ಪಿಸಿರಿ. ಇನ್ನು ನಾನು ಬರುವೆ."

ಹಸುವು ಕರುವಿನಕಡೆಗೆ ಮತ್ತೆ ಹೊರಟು—ಮಗು, ನೀನು ಚಿಕ್ಕವ, ಅಶಕ್ತ, ಅದಕ್ಕಾಗಿ ಅನ್ಯರನ್ನು ಓಲೈಸು. ಎಲ್ಲರನ್ನು ನಿನ್ನಂತೆ ಕಾಣು. ಸತ್ಯ ನುಡಿ, ಸವಿ ನುಡಿ, ಯಾವಾಗಲೂ ಹಿಂಡಿನಲ್ಲಿರು. ಒಬ್ಬಂಟಿಗನಾಗಿ ವರ್ತಿಸಬೇಡ. ದುಷ್ಟ ಪ್ರಾಣಿಗಳು ಯಾವಾಗಲೂ ಹೊಂದುತ್ತಿರುವವು. ಅದರಲ್ಲಿ ನಮ್ಮಂತಹ ಸಭ್ಯರಿಗೆ ತೊಂದರೆ ಹೆಚ್ಚು. ಆದಾಗ್ಗೂ ನಮಗೆ ತಕ್ಕಂತೆ ಕ್ಷಮೆ ಇರಲಿ. ಮಗುವೆ ತಡವಾಯಿತು. ನಿನ್ನ ಅಣ್ಣನು— ಹುಲಿರಾಯನು ಬಹಳ ಹಸದಿರಬಹುದು. ಇನ್ನು ಬರುವೆ. ನಿಮ್ಮಿಬ್ಬರ ಋಣ ಇಂದು ತೀರಿತು. ಪರಮಾತ್ಮನ ಬಯಕೆ.

ಗಂಟಲು ಬಿಗಿಯಿತು. ಕನಿಕರದಿಂದ ದುಃಖವು ಇಮ್ಮಡಿಸಿತು. ಕೊನೆಗೆ ಹಸುವು ಕರುವಿನ ನೆತ್ತಿಯನ್ನು ಮೂಸಿ, ಅಪ್ಪಿಕೊಂಡು. 'ಚಿರಜೀವಿಯಾಗಿ ಸುಖವಾಗಿರು' ಎಂದು ಹರಿಸಿ ಮೃತ್ಯುದೇವತೆಗೆ ತುತ್ತಾಗಲು ಹಟ್ಟಿಯಿಂದ ಹೊರಬಿತ್ತು.

೪

ಹಸುವು ಕರುವನ್ನು ಕಾಣಲು ಬಂದುದಕ್ಕಿಂತ ಬಲವಾಗಿ ಧಾವಿಸಿ ಹುಲಿರಾಯನ ಕಡೆಗೆ ಬಂತು. ತನ್ನ ಎಳೆಗರುವು ಪರಿದೇಶಿಯಾಯಿತಲ್ಲ ಎಂಬ ದುಃಖವು ಒಂದೆಡೆಗೆ; ಮತ್ತು ಸತ್ಯಕ್ಕಾಗಿ ಸಾವನ್ನೆದುರಿಸುವೆನಲ್ಲ ಎಂಬ ಆನಂದವು ಮತ್ತೊಂದೆಡೆಗೆ. ಹೀಗೆ ಮೂರು ವಿಧವಾಗಿತ್ತು ಆ ಹಸುವಿನ ಮನಸ್ಥಿತಿ. ಹಸುವಿನ ಹಾದಿಯನ್ನೇ ಕಾಯ್ದು ಕುಳಿತ ಹುಲಿರಾಯನು ಹಸುವು ಬಂದೊಡನೆ ಬಾಲ ಚಿಮುಕಿಸಿ, ಟಣ್ಣನೆ ಹಾರಿ ಎದುರು ನಿಂತು—"ಅಮ್ಮಾ, ಬಂದೆಯಾ, ಹಸಿವೆಯಿಂದ ನನ್ನ ಪ್ರಾಣ ಈಗಲೋ ಆಗಲೋ ಹಾರುವುದರಲ್ಲಿವೆ" ಎಂದು ಗುಡುಗಿತು.

**ಹಸುವು :—**ಅಣ್ಣಾ, ಹುಲಿರಾಯಾ, ಹಾಗಿದ್ದರೆ ತಡವೇಕೆ? ಇಕೋ, ಮಾಂಸವಿದೆ, ಖಂಡವಿದೆ, ಗುಂಡಿಗೆಯ ಬಿಸಿರಕ್ತವಿದೆ. ತಕ್ಕೋ! ಈ ಶರೀರವು ನಿನಗಾಗಿ ಕಟ್ಟಿದ ಬುತ್ತಿ. ತಿಂದು ಹಸಿವೆಯನ್ನು ಹಿಂಗಿಸು; ತೃಪ್ತನಾಗು. ದೇಹದ ಹಂಗು ನನಗಿಲ್ಲ. ಸತ್ಯಕ್ಕಾಗಿ ಬಲಿಯಾದ ಆನಂದವಿದೆ; ಪರೋಪಕಾರಕ್ಕಾಗಿ ಆತ್ಮ ಬಲಿದಾನ ಮಾಡಿದ ಸಂತುಷ್ಟಿಯಿದೆ. ರಾಮರಾಮ." ಎಂದು ಕಣ್ಣು ಮುಚ್ಚಿ ಮೋರೆ ಮೇಲೆ ಕೈತ್ತಿ ನಿಂತಿತು.

ಹಸುವಿನ ಸತ್ಯಸಂಧತೆ, ನಿಸ್ಪೃಹತೆ ಮೊದಲಾದ ದೈವೀ ಗುಣಗಳನ್ನು ಕಂಡು ಹುಲಿರಾಯನ ಸ್ವಾಭಾವಿಕ—ನಿಸರ್ಗಸಿದ್ಧವಾದ ವೈರವು ಅಡಗಿತು; ವಿರತಿ ಹೆಚ್ಚಿತು; ಹಸಿವು ಹಿಂಗಿತು; ಅಲ್ಲದೆ ಮಾತೃದೈವತದಂತೆ ಹಸುವಿನ ಬಗ್ಗೆ ಪೂಜ್ಯಬುದ್ಧಿಯುಂಟಾಯಿತು.

**ಹುಲಿ :—**ಅಮ್ಮಾ, ನಿನ್ನ ವಾತ್ಸಲ್ಯಪೂರ್ಣವೂ ದಯಾರ್ದ್ರವೂ ಕಲ್ಯಾಣಕರವೂ ಆದ ಮುಖಮಂಡಲವನ್ನು ಕಂಡೊಡನೆ ದೇವಲೋಕದಿಂದ ಸುಧೆಯನ್ನು ಸೇವಿಸಿದಂತೆ ಹಸಿವು ಹಿಂಗಿತು; ಅಂತರಂಗವು ಸಂತುಷ್ಟಿ ಪಡೆಯಿತು. ಪುತ್ರಸ್ನೇಹದಲ್ಲಿ ಸಿಲುಕಿ ನೀನು ಆಳಿಮನ ಮಾಡುವೆಯೊ, ಕೊಟ್ಟ ವಚನ ಸ್ಮರಿಸಿ ಸತ್ಯವನ್ನಾಚರಿಸುವೆಯೋ ಎಂಬುದನ್ನು ನೋಡುವದಾಗಿಯೆ ಹಟ್ಟಿಗೆ ಹೋಗಲು ಸಮ್ಮತಿಸಿದೆ. ಇನ್ನು ಬೆದರದಿರು. ನಿನಗೆ ಜೀವದಾನ ಮಾಡಿರುವೆ. ಅಲ್ಲಲ್ಲ. ದಾನ ಕೊಡಲು ನಾನೆಷ್ಟರವನು? ನಿನ್ನ ಸತ್ಯಾಚರಣೆಯೇ—ಸತ್ಯಸ್ವರೂಪದ ಬ್ರಹ್ಮವೇ ನಿನಗೆ ಜೀವದಾನ ಮಾಡಿದೆ. ಹಾಗಿಲ್ಲದೆ ನನ್ನ ಹಿಂಸಕ ಪ್ರಕೃತಿಯನ್ನು—ನಿಸರ್ಗವನ್ನು ಬದಲಿಸುವ ಸಾಮರ್ಥ್ಯವು ಆದಾರಿಗೆ? ನಿನ್ನ ಸತ್ಯವರ್ತನೆಯಿಂದ ನಾನು ಅಹಿಂಸಕನಾದೆ. ಅಮ್ಮ, ನೀನು ಹೆತ್ತ ತಾಯಿಗಿಂತ ಅಧಿಕಳು. ವಂದ್ಯಳು. ಅವ್ವಾ, ಧೇನು ಮಾತೆ, ಇನ್ನು ನೀನು ನಿನ್ನ ಮುದ್ದು ಮಗುವಿನೊಂದಿಗೆ ಸುಖಿಯಾಗಿರು; ಹೋಗು."ಎಂದು ನುಡಿದು, ನಿತಾಂತ ಸತ್ಯನಿಷ್ಠೆಗಾಗಿ ಕೃತಜ್ಞತೆಯಿಂದ ಕಣ್ಣೀರಿಟ್ಟಿತು. ಅದನ್ನು ಕಂಡು ಆಕಳವೂ ಕಣ್ಣೀರಿಟ್ಟಿತು.

ಸತ್ಯದಿಂದಲೇ ಪ್ರಾಣಿಗಳಿಗೆ ಸುಖ; ಜಗತ್ತಿನ ಸಂಸ್ಥಿತಿ, ಅಂತೇ ಸತ್ಯ, ಅಹಿಂಸೆಗೆ ಪ್ರವರ್ತಕರಾದ ಪೂಜ್ಯ ಗಾಂಧೀಜಿಯವರು—"ಸತ್ಯಕ್ಕಾಗಿ ಸಂಕಟವನ್ನನುಭವಿಸಬೇಕಾದರೂ ಅಷ್ಟೇ ಏಕೆ ಸಾವನ್ನಪ್ಪಬೇಕಾದರೂ ಚಿಂತೆಯಿಲ್ಲ; ಸತ್ಯದ ಕೈಬಿಟ್ಟು ಕೃತಘ್ನರಾಗಬೇಡಿ"ರೆಂದು ಜಗತ್ತಿಗೆ ಸಾರಿದರು. ಸಾರಿದಂತೆ ಸತ್ಯಕ್ಕಾಗಿಯೆ ಸಂತಸದಿಂದ ಸಾವನ್ನಪ್ಪಿ ಅಮರರಾದರು. ಸತ್ಯಸಂಧರಾದ ಹರಿಶ್ಚಂದ್ರ, ಯುಧಿಷ್ಠಿರ ಮೊದಲಾದವರ ಮಾಲೆಯೊಳಗಿನ ಮಣಿಯಾದರು.




# ಅವ್ವೈಯಾರ ಕೃತಿಗಳು

ಶ್ರೀ ಎಲ್. ಗುಂಡಪ್ಪ, ಎಂ.ಎ.

## ೩. ಮುದುವೊರೆ (ಮುಂದುವರಿದುದು)

೨೦

ಒಡಹುಟ್ಟಿದವರೆ ಬಂಧುಗಳಲ್ಲ

ಉಡನ್ ಪಿಱನ್ದಾರ್ ಶುಱತ್ತಾರೆನ್ಱಿರುಕ್ಕವೇಣ್ಡಾ.
ಉಡನ್ ಪಿಱನ್ದೇ ಕೊಲ್ಲುಮ್ ವಿಯಾದಿ.–ಉಡನ್ ಪಿಱವಾ
ಮಾಮಲೈಯಿಲುಳ್ಳ ಮರುನ್ದೇ ಪಿಣಿದೀರ್ಕ್ಕುಮ್.
ಅಮ್ಮರುನ್ದು ಪೋಲ್ವಾರು ಮುಣ್ಡು.

ಒಡಹುಟ್ಟಿದವರು ಬಂಧುಗಳು ಎಂದಿರಬೇಡ.
ಒಡನೆ ಹುಟ್ಟಿಯೆ ಕೊಲ್ಗು ವ್ಯಾಧಿ.–ಒಡಹುಟ್ಟದೆ
ಮಾಮಲೆಯಲಿಹ ಮದ್ದೆ ನೋವ ಪರಿಹರಿಸುವುದು.
ಆ ಮದ್ದ ಹೋಲುವರುಮುಂಟು.

ಕೊಲ್ಗು = ಕೊಲ್ಲುತ್ತದೆ. ಮಾಮಲೆ= ಮಹಾಪರ್ವತ; ದೊಡ್ಡಬೆಟ್ಟ. ಮದ್ದು= ಔಷಧಿ. ನೋವು= ರೋಗ.

೨೧

ಒಳ್ಳೆ ಹೆಂಡತಿ ಇಲ್ಲದ ಮನೆ ಹುಲಿಯ ಗವಿ

ಇಲ್ಲಾಳಗತ್ತಿರುಕ್ಕ ಇಲ್ಲಾದದೊನ್ಱಿಲ್ಲೈ.
ಇಲ್ಲಾಳುಮ್ ಇಲ್ಲಾಳೇಯಾಮಾಯಿನ್,–ಇಲ್ಲಾಳ್
ವಲಿಕಿಡನ್ದ ಮಾಱಮುಱೈಕ್ಕುಮೇಲ್, ಅವ್ವಿಲ್
ಪುಲಿಕಿಡನ್ದ ತೂಱಾಯ್ ವಿಡುಮ್

ಮನೆಯವಳು ಒಳಗಿರಲು ಇಲ್ಲದ್ದು ಒಂದಿಲ್ಲ.
ಮನೆಯವಳು ಇಲ್ಲಳೇ ಆದರೆ,–ಮನೆಯವಳು
ಕಟುತೆ ತುಂಬಿದ ಮಾತನಾಡಿದರೆ, ಆ ಮನೆ
ಹುಲಿ ಕೆಡೆದ ಗವಿಯಾಗಿ ಬಿಡುಗು.

ಮನೆಯವಳು: ಹೆಂಡತಿ; ಗೃಹಿಣಿ. ಇಲ್ಲಳೇ ಆದರೆ: ಇಲ್ಲದವಳೇ ಆದರೆ; ಇಲ್ಲವಾದರೆ. ಕೆಡೆದ =ಮಲಗಿದ. ಬಿಡುಗು= ಬಿಡುತ್ತದೆ. "ಗೃಹಿಣೀ ಗೃಹಮುಚ್ಯತೇ."

೨೨

ಅದೃಷ್ಟವಿದ್ದಷ್ಟೇ ಫಲ

ಎಱುದಿಯವಾಱೇ ಕಾಣ್ ಇರಙ್ಗು ಮಡನೆಞ್ಜೇ;
ಕರುದಿಯವಾಱಾಮೋ ಕರುಮಮ್?-ಕರುದಿಪ್ಪೋಯ್
ಕ್ಕಱ್ಪಗತ್ತೈಚ್ಚೇರ್ನ್ದೋರ್ಕ್ಕು ಕ್ಕಾಞ್ಜಿರಙ್ಗಾಯಿಙ್ದದೇಲ್
ಮುಱ್ಪವತ್ತಿಱ್ ಚೆಯ್ದ ವಿನೈ.

ಬರೆದ ಹಾಗೆಯೆ ಕಾಣ, ಮರುಗುವ ಮರುಳ್ಮನವೆ;
ನೆನೆದ ಹಾಗಾಗುವುದೆ ಕರ್ಮ?–ನೆನೆದೈದಿ
ಕಲ್ಪಕವ ಸೇರ್ದರ್ಗೆ ಕಾಂಜಿರಕಾಯ್ಕೊಟ್ಟರೆ,
ಮುನ್ನ ಭವದಲಿ ಗೈದ ಕರ್ಮ.

ಕಲ್ಪಕ: ಕಲ್ಪವೃಕ್ಷ. ಕಾಂಜಿರಕಾಯ್: ಹೊರನೋಟಕ್ಕೆ ಚೆನ್ನಾಗಿದ್ದು ವಿಷಮಯವಾದ ಒಂದು ಬಗೆಯ ಕಾಯಿ.

೨೩

ಉತ್ತಮರ ಕೋಪ ಬೇಗ ಮರೆಯಾಗುತ್ತದೆ

ಕಱ್ಪಿಳವೋಡೊಪ್ಪರ್ ಕಯವರ್ ಕಡುಞ್ಜಿನತ್ತು.
ಪ್ಪೊಱ್ಪಿಳವೋಡೊಪ್ಪಾರುಮ್ ಪೋಲ್ವಾರೇ.–ವಿಱ್ಪಿಡಿತ್ತು
ನೀರ್ಕ್ಕಿರಿಱಿಯವೆಯ್ದ ವಡುಪ್ಪೋಲ ಮಾಱುಮೇ
ಶಿರೊಱುಗು ಶಾನ್ರೋರ್ ಶಿನಮ್.

ಕಲ್ ಸೀಳಿಗೆಣೆಯಹರು ನೀಚರು ಕಡು ಮುಳಿದು.
ಹೊನ್ ಸೀಳಿಗೆಣೆಯಹರುಮೆಣೆಯಪ್ಪರು.–ಬಿಲ್ವಿಡಿದು
ನೀರ್ ಸೀಳಲಾದ ಗಾಯದ ಹಾಗೆ ಮಾರ್ಪಡುಗು
ಮೇಲ್ನಡೆಯ ಸಂಪನ್ನರ್ಗೊಗೆದ ಮುನಿಸು.

ಮುಳಿದು= ಕೋಪಿಸಿ. ಮಾರ್ಪಡುಗು= ಮಾರ್ಪಡುವುದು. ಒಗೆದ = ಹುಟ್ಟಿದ. ಕಲ್ಲು ಸೀಳಿದರೆ ಮತ್ತೆ ಕೂಡಿಸಲಾಗುವುದಿಲ್ಲ. ಚಿನ್ನ ಸೀಳಿದರೆ ಸುಲಭವಾಗಿ ಕೂಡಿಸಬಹುದು. ಹಾಗೆಯೇ ನೀಚರ ಮತ್ತು ಉತ್ತಮರ ಕೋಪ.

೨೪

ತಮ್ಮಂಥವರೇ ತಮಗೆ ಜೊತೆ

ನಱಾಮರೈಕಯತ್ತಿನಲ್ಲನ್ನ ಞ್ಜೇರ್ನ್ದಾಱ್ಪೋಲ್
ಕಱಾರೈ ಕ್ಕಱಾರೇ ಕಾಮುಱುವಾರ್.–ಕಱ್ಪಿಲಾ

ಮೂರ್ಕ್ಕರೈ ಮೂರ್ಕ್ಕರ್ ಮುಗಪ್ಪರ್.
ಮುದುಗಾಟ್ಟಿಱ್
ಕಾಕ್ಕೈಯುಗಕ್ಕುಮ್ ಪಿಣಮ್.

ನಲ್ಲ ತಾವರೆಗೊಳದಿ ನಲ್ಲಂಚೆ ಸೇರ್ದಂತೆ
ಕಲ್ತವರನ್ ಕಲ್ತವರೆ ನೆರೆ ಬಯಸುವರ್.–ಕಲಿವಿರದ
ಮೂರ್ಖರನ್ ಮೂರ್ಖರೇ ಬಯಸುವರು.
ಸುಡುಗಾಡೊಳ್
ಕಾಗೆ ಬಯಸುವುದು ಹೆಣವಂ.

ನಲ್ಲ=ಒಳ್ಳೆಯ. ನಲ್ಲಂಚೆ= ಒಳ್ಳೆಯ ಹಂಸ. ಕಲಿವು= ವಿದ್ಯೆ.

೨೫

ಒಳ್ಳೆಯವರಿಗೆ ಭಯವಿಲ್ಲ, ಕೆಟ್ಟವರಿಗೆ ಧೈರ್ಯವಿಲ್ಲ

ನಞ್ಜುಡೈಮೈ ತಾನಱಿನ್ದು ನಾಗಙ್ಗರನ್ದುಱೈಯುಮ್.
ಅಞ್ಜಾಪ್ಪುಱಙ್ಗಿಡಕ್ಕುಮ್ ನೀರ್ಪ್ಪಾಮ್ಬು.–
ನೆಞ್ಜಿಱ್
ಕರವುಡೈಯಾರ್ ತಮ್ಮೈಕ್ಕರಪ್ಪರ್. ಕರವಾರ್
ಕರವಿಲಾ ನೆಞ್ಜತ್ತವರ್.

ನಂಜಿಹುದ ತಾನರಿದು ನಾಗ ವಾಸಿವುದಡಗಿ.
ಅಂಜದೆಯೆ ಹೊರಗೆ ಕೆಡೆವುದು ನೀರ ಹಾವು –
ಮನದಿ
ಮರೆಯುಳ್ಳವರು ತಮ್ಮನಡಗಿಪರು. ಅಡಗಿಸರು
ಮರೆಯಿಲ್ಲದಿಹ ಮನದವರ್.

ನಂಜು= ವಿಷ. ನಾಗ= ನಾಗರಹಾವು. ಮರೆ= ವಂಚನೆ. ತಮ್ಮನಡಗಿಪರು= ತಾವು ಅಡಗಿ ಮರೆಯಾಗುತ್ತಾರೆ.

೨೬

ವಿದ್ಯಾವಂತನಿಗೆ ದೊರೆಗಿಂತ ಹೆಚ್ಚು ಮಹಿಮೆ

ಮನ್ನನು ಮಾಶಱಕ್ಕಱ್ಱೋನುಞ್ಜೀರ್ ತೂಕ್ಕಿನ್
ಮನ್ನನಿಱ್ ಕಱ್ಱೋನ್ ಶಿಱಪ್ಪುಡೈಯನ್.–ಮನ್ನಱ್ಕು
ತ್ತನ್ ದೇಶಮಲ್ಲಾಱ್ ಚಿಱಪ್ಪಿಲ್ಲೈ. ಕಱ್ಱೋರ್ಕ್ಕು
ಚ್ಚೆನ್ಱ ಇಡಮೆಲ್ಲಾಞ್ಜಿಱಪ್ಪು.

ದೊರೆಯು ಮಾಸಿರದೆ ಕಲ್ತವನ ನೆರೆ ತೂಗಿದರೆ
ದೊರೆಗಿಂತ ಕಲ್ತವನೆ ಮೇಲ್ಮೆಯುಳ್ಳವನು–ದೊರೆಗೆ
ತನ್ ನಾಡೊಳಲ್ಲದೆ ಮಹಿಮೆಯಿಲ್ಲ. ಕಲ್ತವಗೆ
ಹೋದ ಎಡೆಯೆಲ್ಲ ಮಹಿಮೆ.

ಮಾಸು= ಕೊಳೆ; ದೋಷ. ಮಾಸಿರದೆ ಕಲ್ತವನು: ಸಂದೇಹ ಮುಂತಾದ ಯಾವ ದೋಷವೂ ಇಲ್ಲದಂತೆ ಚೆನ್ನಾಗಿ ಕಲಿತವನು, ವಿದ್ವಾಂಸ.

“ಸ್ವದೇಶೇ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ”

೨೭

ಮೃತ್ಯು

ಕಲ್ಲಾದ ಮಾನ್ದರ್ಕ್ಕು ಕಱ್ಱುಣರ್ನ್ದಾರ್ ಶೊಱ್ಱ
ಱಮ್.
ಅಲ್ಲಾದ ಮಾನ್ದರ್ಕ್ಕಱಙ್ಗೂಱ್ಱಮ್.– ಮೆಲ್ಲಿಯ
ವಾೞೈಕ್ಕುತ್ತಾನೀನ್ಱ ಕಾಯ್ ಕೂಱ್ಱಮೇ
ಇಲ್ಲಿಱ್ ಕಿಶೈನ್ದೊೞುಗಾ ಪ್ಪೆಣ್.

ಕಲಿಯದ ಮಾನಿಸರ್ಗೆ ಕಲ್ತರಿತವರ ಸೊಲ್
ಮೃತ್ಯು.
ಅಲ್ಲದ ಮಾನಿಸರ್ಗೆ ಅರವೆ ಮೃತ್ಯು.–ಮೆತ್ತನೆಯ
ಬಾಳೆಗೆ ತಾನ್ ಪಡೆದ ಕಾಯ್ ಮೃತ್ಯು. ಮೃತ್ಯುವೇ
ಮನೆಬಾಳ್ಕೆಗೊಪ್ಪುನಡೆಯಿರದ ಹೆಣ್ಣು.

ಸೊಲ್= ಮಾತು. ಅಲ್ಲದ ಮಾನಿಸರು= ಧರ್ಮವಿರೋಧಿಗಳಾದ, ಧರ್ಮಿಷ್ಠರಲ್ಲದ ಮನುಷ್ಯರು. ಅರ =ಧರ್ಮ. ಮನೆ ಬಾಳ್ಕೆ= ಗೃಹಸ್ಥ ಜೀವನ. ಒಪ್ಪುನಡೆ =ಹೊಂದುವ ನಡವಳಿಕೆ.

೨೮

ಧನಹೋದರೂ ಗುಣಹೋಗದು

ಶನ್ದನ ಮೆನ್ಗುಱಡು ತಾನ್ದೇಯ್ನ್ದ ಕಾಲತ್ತುಙ್
ಗನ್ದಙ್ಗುಱೈ ಪಡಾದಾದಲಾಲ್–ತನ್ದಮ್
ದನಞ್ಜಿಱಿಯರಾಯಿನು ನ್ದಾರ್ ವೇನ್ದರ್ ಕೇಟ್ಟಾಲ್
ಮನಞ್ಜಿಱಿಯರಾವರೋ ಮಱ್ಱು ?

ಚಂದನದ ಮೆದುಗೊರಡು ತಾನ್ ತೇಯ್ದ ಕಾಲದಲೂ
ಗಂಧದಲಿ ಕೊರೆಪಡದು ; ಅಂತಾಗಿರೆ–ತಂತಮ್ಮ
ಧನಕಿರಿಯರಾದರೂ ಮಾಲೆಯರಸರು ಕೇಡೊಳ್
ಮನಕಿರಿಯರಾಗುವರೊ ಮತ್ತೆ ?

ತೇಯ್ದ ಕಾಲದಲೂ= ತೇಯ್ದು ತೇಯ್ದು ಸಣ್ಣಗಾದಾಗಲೂ. ಕೊರೆಪಡು= ಕಡಮೆಯಾಗು. ಕುಂದು. ಧನಕಿರಿಯರ್ : ಧನದಿಂದ ಕಿರಿಯರು, ಸಂಪತ್ತಿನಲ್ಲಿ ಕಡಮೆಯಾದವರು. ಮಾಲೆಯರಸ : ಹೂದಂಡೆ ಧರಿಸಿದ ರಾಜ. ಮನಕಿರಿಯರು= ಮನಸ್ಸಿನಿಂದ ಕಿರಿಯರು, ಉತ್ಸಾಹ ಕುಂದಿದವರು, ಸಣ್ಣ ಮನಸ್ಸಿನವರು.

೧೯

ಲಕ್ಷ್ಮಿ ಬಂದರೆ ಎಲ್ಲಾ ಬರುತ್ತವೆ; ಹೋದರೆ ಎಲ್ಲಾ ಹೋಗುತ್ತವೆ

ಮರುವಿನಿಯ ಶುಱ್ಱಮುಮ್ ವಾನ್ ಪೊರುಳುಮ್ ನಲ್ಲ
ಉರುವುಮ್ ಉಯರ್ ಕುಲಮುಮೆಲ್ಲಾಮ್—
ತಿರುಮಡನ್ದೈ
ಅವ್ವೋದವಳೋಡುಮಾಗುಮ್; ಅವಳ್ ಪಿರಿನ್ದು
ಪೋಮ್ಬೋದವಳೋಡುಮ್ ಪೋಮ್.

ಸೇರ್ದಿನಿಯ ಬಂಧುಗಳು, ಮೇಲು ಧನ, ಸೊಗಸಾದ
ರೂಪ, ಉತ್ತಮದ ಕುಲ ಇವುಗಳೆಲ್ಲ—ಸಿರಿದೇವಿ
ಬರುವಂದು ಅವಳೊಡನೆ ಬರುವುವು; ಅವಳಗಲಿ
ಹೋಗುವಂದವಳೊಡನೆಯೇ ನಡೆವುವು.

ಸೇರ್ದಿನಿಯ ಬಂಧುಗಳು = ವಿಶ್ವಾಸದಿಂದ ಜೊತೆ ಸೇರಿ ಪ್ರಿಯರಾಗಿರುವ ನಂಟರು. ಸಿರಿದೇವಿ= ಲಕ್ಷ್ಮೀದೇವಿ.

೨೦

ತಿಳಿದವರು ಅಪಕಾರಿಗಳಿಗೂ ಉಪಕಾರವನ್ನೇ ಮಾಡುತ್ತಾರೆ

ಶಾನ್ದನೈಯುನ್ದೀಯನವೇ ಶೆಯ್ದಿಡಿನು ನ್ದಾಮವರ್ಕೈ
ಆನ್ದನೈಯುಙ್ಗಾಪ್ಪರಱಿವುಡೈಯೋರ್.—ಮಾನ್ದರ್
ಕುಱೈಕ್ಕುನ್ದನೈಯುಙ್ಗುಳಿರ್ ನಿೞಲೈತ್ತನ್ದು
ಮಱೈಕ್ಕುಮಾಙ್ಗಣ್ಡೀರ್ ಮರಮ್.

ಸಾವನಿತು ಕೇಡುಗಳ ಗೈದಿಡೆಯಂ ತಾಮವರ
ನಪ್ಪನಿತು ಕಾಪಿಡುವರರಿವುಳ್ಳವರ್.—ಮಾನವರು
ಕೊರೆದು ಕಡಿಕಡಿವನಿತುಂ ತಣ್ಣೆಳಲನವರ್ಗಿತ್ತು
ಮರೆಯ ಕೊಡುವುವು ಕಂಡಿರೇ ಮರಗಳ್.

ಗೈದಿಡೆಯುಂ= ಮತ್ತೆ ಮತ್ತೆ ಮಾಡುತ್ತಿದ್ದರೂ. ಅಪ್ಪನಿತು= ಸಾಧ್ಯವಾದಷ್ಟು. ಕಾಪಿಡು= ರಕ್ಷಣೆಕೊಡು, ಕಾಪಾಡು. ಮರೆ = ರಕ್ಷಣೆ.

**ಮುದುವೊರೆ ಮುಗಿಯಿತು**

---



# ಸಕ್ಕರೆ ಚರಿತ್ರೆ

**(ಸಕ್ಕರೆ ಕೈಗಾರಿಕೆಯ ಹುಟ್ಟು ಮತ್ತು ಬೆಳವಣಿಗೆಯ ಸಂಕ್ಷಿಪ್ತ ಪರಿಚಯ)**

ಶ್ರೀ ಬಿ.ಎಸ್. ನಾಗಪ್ಪ, ಮಂಡ್ಯ

(ಜುಲೈ ತಿಂಗಳ ಸಂಚಿಕೆಯಿಂದ ಮುಂದುವರಿದುದು)

ನಮ್ಮ ಸಕ್ಕರೆ ಕೈಗಾರಿಕೆಯಲ್ಲಿ ಹೊಸಯುಗ ೧೮೩೪ ರಿಂದ ಆರಂಭವಾಯಿತೆಂದು ಹೇಳಬಹುದು. ೧೮೩೪ರಲ್ಲಿ ವೆಸ್ಟ್ ಇಂಡೀಸ್ ಮತ್ತು ಮಾರಿಷಸ್ ದ್ವೀಪಗಳಲ್ಲಿ ಅಲ್ಲಿಯ ಸರ್ಕಾರ ಗುಲಾಮವ್ಯಾಪಾರವನ್ನು ಕಾನೂನಿನ ಮೂಲಕ ರದ್ದುಗೊಳಿಸಿದುದು ಭಾರತ ಸಕ್ಕರೆ ಕೈಗಾರಿಕೆ ಬೆಳೆಯಲು ಪರೋಕ್ಷವಾಗಿ ತುಂಬಾ ಸಹಾಯವಾಯಿತು. ಗುಲಾಮ ವ್ಯಾಪಾರ ರದ್ದು ಮಾಡಿದಕೂಡಲೇ ಈ ದ್ವೀಪಗಳಲ್ಲಿದ್ದ ಪ್ಲಾಂಟರುಗಳಿಗೆಲ್ಲ ಕೈಕಟ್ಟಿದಂತಾಗಿ, ಇನ್ನು ತಮ್ಮ ಬಂಡವಾಳಕ್ಕೆ ಎಲ್ಲಿ ಧಕ್ಕೆ ಬರುವುದೋ ಎಂದು ಹೆದರಿ ಇದ್ದುಬದ್ದುದನ್ನು ತೆಗೆದುಕೊಂಡು ಭಾರತಕ್ಕೆ ಬರಲಾರಂಭಿಸಿದರು. ಹೀಗೆ ಬಂದವರಲ್ಲಿ ಲಿಯನಾರ್ಡ್ ವ್ರೇ ಎಂಬುವನು ಗೋರಕ್‌ಪುರದಲ್ಲಿ ಒಂದು ಕಬ್ಬಿನ ವ್ಯವಸಾಯ ಕ್ಷೇತ್ರ ತೆರೆದನು. ಆಂಡ್ರೂಸಿಮಿ ಎಂಬುವನು ಪಾಂಡ್ರುನ ಎಂಬಲ್ಲಿ ಒಂದು ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಿದನು. ಶಿರಹಟ್ಟಿನ ಬಗಮತಿ ಎಂಬಲ್ಲಿ ಆರ್ಥರ್ ಕ್ರೂಕ್ ಎಂಬುವನು ಸಕ್ಕರೆ ಉದ್ಯಮಕ್ಕೆ ಕೈ ಹಚ್ಚಿದನು. ಸಕ್ಕರೆ ಕೈಗಾರಿಕೆಯಲ್ಲಿ ಪ್ರಸಿದ್ಧ ಎಂಜನಿಯರುಗಳೆನಿಸಿಕೊಂಡಿದ್ದ ಎಸ್. ಹೆಚ್. ರಾಬಿನ್‌ಸನ್ ಮತ್ತು ಕ್ಯಾಪ್ಟನ್ ಸ್ಲಿಮನ್ ಎಂಬುವರು ಒಟ್ಟಿಗೆ ಸೇರಿ ಜಬ್ಬಲ್‌ಪುರದಲ್ಲಿ ಕಬ್ಬಿನ ವ್ಯವಸಾಯ ಕ್ಷೇತ್ರ ಹಾಗೂ ಸಕ್ಕರೆ ಕಾರ್ಖಾನೆ ಸ್ಥಾಪಿಸಿದರು. ಹೀಗೆ ಭಾರತದಲ್ಲಿ ಕ್ರಮೇಣ ಒಂದಾದ ಮೇಲೊಂದು ಸಕ್ಕರೆ ಕಾರ್ಖಾನೆಗಳು ಸ್ಥಾಪಿತವಾಗಿ ತನ್ಮೂಲಕ ಸಕ್ಕರೆ ಉತ್ಪತ್ತಿ ಪ್ರಮಾಣ ಹೆಚ್ಚಿತಲ್ಲದೆ, ವಿದೇಶಗಳಿಗೆ ಸಕ್ಕರೆ ರಫ್ತಿನ ಪ್ರಮಾಣವೂ ಹೆಚ್ಚಿತು. ೧೮೪೭ರಲ್ಲಿ ಭಾರತದಿಂದ ಬ್ರಿಟನ್ನಿಗೆ

ರಫ್ತಾದ ಸಕ್ಕರೆ ಪ್ರಮಾಣ ೬೦ ಸಾವಿರ ಟನ್ನುಗಳೆಂದು ಗೊತ್ತಾಗಿದೆ.

ವಿದೇಶೀಯರ ಉತ್ತೇಜನ ಹಾಗೂ ಮಾಲೀಕತನದಲ್ಲಿ ಆಧುನಿಕ ಸಕ್ಕರೆ ಕಾರ್ಖಾನೆಗಳು ಕ್ರಮೇಣ ಉತ್ತರ ಭಾರತದ ಆಜಿಪುರ, ಮೋತೀಹಾರಿ, ಭಾರಚಾಕಿಯ, ಗೋರಕ್‌ಪುರ, ಬೆಲ್‌ಸುಂಡ ಮತ್ತು ರೋಸ ಎಂಬಲ್ಲಿಯೂ ಆರಂಭವಾದುವು. ಪ್ಯಾರೀ ಕಂಪೆನಿಯವರು ಇದೇ ಸಮಯದಲ್ಲಿ ಮದರಾಸ್ ಪ್ರಾಂತ್ಯದಲ್ಲಿ ಒಂದು ಸಕ್ಕರೆ ಕಾರ್ಖಾನೆ ತೆರೆದರು. ಅನಂತರ ಬಿನ್ನಿ ಕಂಪೆನಿಯವರು ೧೮೬೫ರಲ್ಲಿ ಆಸ್ಕರ್ ಷುಗರ್ ವರ್ಕ್ಸ್ ಎಂಬ ಕಾರ್ಖಾನೆ ಸ್ಥಾಪಿಸಿದರು. ೧೮೭೭ರಲ್ಲಿ ಮಿರ್ಲಿಸ್ ವಾಟ್ಸನ್ ಕಂಪೆನಿಯವರು ಪಂಜಾಬಿನ ಮಧುಪುರಿ ಎಂಬಲ್ಲಿ ಮೊಟ್ಟಮೊದಲನೆಯದಾಗಿ ಒಂದು ಆಧುನಿಕ ಸಕ್ಕರೆ ಕಾರ್ಖಾನೆ ಕಟ್ಟಿದರು. ಮಿರ್ಲಿಸ್ ವಾಟ್ಸನ್ ಕಂಪೆನಿಯವರು ಸಕ್ಕರೆ ಯಂತ್ರ ತಯಾರು ಮಾಡುವುದರಲ್ಲಿ ಈಗ ಪ್ರಪಂಚದಲ್ಲೇ ಪ್ರಸಿದ್ಧರಾಗಿದ್ದಾರೆ. ಭಾರತದಲ್ಲಿ ಈಗ ಇರುವ ಒಟ್ಟು ಸಕ್ಕರೆ ಕಾರ್ಖಾನೆಗಳಲ್ಲಿ ಸುಮಾರು ೧/೩ ಭಾಗ ಇವರಿಂದಲೇ ಕಟ್ಟಲ್ಪಟ್ಟಿದೆ. ೧೯೦೨ರಲ್ಲಿ 'ಇಂಡಿಯನ್ ಡೆವಲಪ್‌ಮೆಂಟ್ ಕಂಪೆನಿ ಎಂಬ ಸಂಸ್ಥೆ ಸ್ಥಾಪನೆಯಾಗಿ ಆದರ ನೇತೃತ್ವದಲ್ಲಿ ೧೯೦೩ರಲ್ಲಿ ಬೀಹಾರಿನ ಒಟ್ಟೂರಿನಲ್ಲಿ ಒಂದು ಭಾರಿ ಆಧುನಿಕ ಕಾರ್ಖಾನೆ ತೆರೆಯಲ್ಪಟ್ಟಿತು. ಅಲ್ಲಿಂದ ಮುಂದಕ್ಕೆ ಉತ್ತರ ಪ್ರದೇಶ ಮತ್ತು ಬೀಹಾರುಗಳಲ್ಲಿ ಕ್ರಮೇಣ ಹೊಸಹೊಸ ಆಧುನಿಕ ಕಾರ್ಖಾನೆಗಳು ಪ್ರಾರಂಭವಾದವು. ಭಾರತದಲ್ಲಿ ಸಕ್ಕರೆ ಸೇವನೆಯ ಪ್ರಮಾಣ ಹೆಚ್ಚಾದಂತೆ, ನಮ್ಮಲ್ಲಿ ತಯಾರಾದ ಸಕ್ಕರೆಯು ನಮಗೇ ಸಾಕಾಗದಂತಾಯಿತು. ತತ್ಪರಿಣಾಮವಾಗಿ ಸಕ್ಕರೆ ಆಮದು ಮಾಡಿಕೊಳ್ಳುವುದು ಹೆಚ್ಚಾಯಿತು. ಯುದ್ಧಪೂರ್ವ ಅಂದರೆ ೧೯೧೬ನೇ ಇಸವಿ ಹಿಂದೆ ಭಾರತಕ್ಕೆ ಬೇಕಾಗುತ್ತಿದ್ದ ಒಟ್ಟು ಸಕ್ಕರೆ ಪ್ರಮಾಣದಲ್ಲಿ ಸುಮಾರು ೩/೪ ಭಾಗ ಆಮದಿನ ಮೂಲಕ ಪೂರೈಸಲಾಗುತ್ತಿತ್ತು.

## ಭಾರತ ಸಕ್ಕರೆ ಸಮಿತಿ

### [ The Indian Sugar Committee ]

ಪ್ರಪಂಚದ ಮೊಟ್ಟಮೊದಲನೆಯ ಮಹಾಯುದ್ಧ ಭಾರತದ ಸಕ್ಕರೆ ಕೈಗಾರಿಕೆಯ ಅಭಿವೃದ್ಧಿಗೆ ತುಂಬಾ ಪ್ರೇರಕವಾಯಿತು. ಈ ಯುದ್ಧ ಕಾಲದಲ್ಲಿ ಭಾರತದಲ್ಲಿ ಸಕ್ಕರೆ ಅಭಾವ ಹೆಚ್ಚಿತಲ್ಲದೆ, ಸಕ್ಕರೆ ಬೆಲೆಯೂ ಹೆಚ್ಚಿಹೋಗಿ ತನ್ಮೂಲಕ ಜನತೆಯಲ್ಲಿ ಸಕ್ಕರೆಗಾಗಿ ಹಾಹಾಕಾರ ಹೆಚ್ಚಿತು. ಈ ಸಕ್ಕರೆ ಅಭಾವ ಹಾಗೂ ಸಕ್ಕರೆ ಬೆಲೆ ಹೆಚ್ಚಿದುದು ಸಕ್ಕರೆ ಕೈಗಾರಿಕೆಯ ಅಭಿವೃದ್ಧಿಗೆ ಸ್ಫೂರ್ತಿ ಕೊಟ್ಟಂತಾಯಿತು. ಅಲ್ಲದೆ ಸಕ್ಕರೆ ಕೈಗಾರಿಕೆಯು ರಾಷ್ಟ್ರೀಯ ಪ್ರಾಮುಖ್ಯತೆಯನ್ನು ಸರ್ಕಾರ ಅರಿತಿದ್ದು ಈ ಸಂದಿಗ್ಧ ಸಮಯದಲ್ಲಯೇ. ಇದೆಲ್ಲದರ ಪರಿಣಾಮವಾಗಿ ಭಾರತ ಸರ್ಕಾರ ಸಕ್ಕರೆ ಕೈಗಾರಿಕೆಯ ಆಗುಹೋಗುಗಳನ್ನು ಪರಿಶೀಲಿಸಿ ವರದಿ ಮಾಡುವುದಕ್ಕಾಗಿ ೧೯೨೦ರಲ್ಲಿ 'ಭಾರತ ಸಕ್ಕರೆ ಸಮಿತಿ' ಎಂಬ ಒಂದು ಸಮಿತಿಯನ್ನು ನೇಮಿಸಿತು. ಈ ಸಮಿತಿಯು ಒಪ್ಪಿಸಿದ ಕೂಲಂಕಷ ಹಾಗೂ ಅಮೂಲ್ಯ ವರದಿಯು ಮುಂದೆ ಭಾರತ ಸರ್ಕಾರ ಸಕ್ಕರೆ ಕೈಗಾರಿಕೆಗೆ ರಕ್ಷಣೆ ಕೊಡುವಬಗ್ಗೆ ವಿಷಯ ಪರಿಶೀಲಿಸಲು ತುಂಬಾ ಸಹಾಯಕವಾಯಿತು.

೧೯೨೯ರಲ್ಲಿ ಸ್ಥಾಪಿತವಾದ 'ಇಂಪೀರಿಯಲ್ ಕೌನ್ಸಿಲ್ ಆಫ್ ಅಗ್ರಿಕಲ್ಚರಲ್ ರಿಸರ್ಚ್' ಸಂಸ್ಥೆ ಕೂಡ ಭಾರತದ ಕಬ್ಬಿನ ವ್ಯವಸಾಯದ ಪ್ರಾಮುಖ್ಯತೆಯನ್ನು ಒತ್ತಿ ಹೇಳಿ, ಭಾರತ ಸರ್ಕಾರವನ್ನು ಸಕ್ಕರೆ ಕೈಗಾರಿಕೆಗೆ ಪ್ರೋತ್ಸಾಹ ಕೊಡಬೇಕೆಂದು ಶಿಫಾರಸು ಮಾಡಿತು. ಭಾರತ ಸರ್ಕಾರದ ವ್ಯವಸಾಯ ಇಲಾಖೆಯ ಒಂದು ಅಂಗವೇ ಆಗಿದ್ದ ಈ ಸಂಸ್ಥೆಯ ಶಿಫಾರಸನ್ನು ಸರ್ಕಾರ ಮಾನ್ಯ ಮಾಡಿತಲ್ಲದೆ, ಸಕ್ಕರೆ ಕೈಗಾರಿಕೆಗೆ ರಕ್ಷಣೆ ಕೊಡಬೇಕೇ ಬೇಡವೇ, ಎಂಬ ವಿಷಯ ಪರಿಶೀಲಿಸಿ ವರದಿ ಮಾಡುವುದಕ್ಕಾಗಿ ೧೯೩೦ರಲ್ಲಿ ಮೊಟ್ಟಮೊದಲನೆಯದಾಗಿ ಸುಂಕಸಮಿತಿಯನ್ನು (Tariff Board) ನೇಮಿಸಿತು.

ಭಾರತ ಸರ್ಕಾರ ಈ ಸುಂಕ ಸಮಿತಿಯನ್ನು ನೇಮಿಸಿದಾಗ, ಭಾರತದಲ್ಲಿ ಸುಮಾರು ೨೩/೪ದಶಲಕ್ಷ ಎಕರೆ ವಿಸ್ತೀರ್ಣ ಪ್ರದೇಶದಲ್ಲಿ (ಪ್ರಪಂಚದ ಒಟ್ಟು ಕಬ್ಬಿನ ವ್ಯವಸಾಯ ನಡೆಯುತ್ತಿತ್ತಲ್ಲದೆ, ಕಬ್ಬಿನಿಂದ ಉತ್ಪತ್ತಿಯಾಗುತ್ತಿದ್ದ ಪದಾರ್ಥಗಳ ಒಟ್ಟು ಬೆಲೆ (ಆಗಿನ ಮಾರು ಕಟ್ಟೆಯ ದರದಂತೆ.) ಸುಮಾರು ೪೨ಕೋಟಿ ರೂಪಾಯಿಗಳಾಗುತ್ತಿತ್ತೆಂದು ಅಂದಾಜು ಮಾಡಲಾಗಿದೆ. ಅಲ್ಲದೆ ಭಾರತಕ್ಕೆ ಆಗಬೇಕಾಗುತ್ತಿದ್ದ ಸಕ್ಕರೆ ಆಮದಿಗಾಗಿ ಪ್ರತಿವರ್ಷ ೩೧ಕೋಟಿ ರೂಪಾಯಿಗಳು ಹೊರದೇಶಗಳಿಗೆ ಹರಿದುಹೋಗುತ್ತಿತ್ತು. ಕಬ್ಬಿನ ಸಂಶೋಧನ ಕೇಂದ್ರಗಳಾದ ಕೊಯಮತ್ತೂರು ಷಹಜಹಾನ್‌ಪುರ, ಮತ್ತು ಪುಸಾಗಳಲ್ಲಿ ಆ ಹೊತ್ತಿಗಾಗಲೇ ಕಬ್ಬಿನ

ಬಗ್ಗೆ ಒಳ್ಳೆ ಸಂಶೋಧನೆಗಳು ನಡೆದು ಎಕರೆಯೊಂದಕ್ಕೆ ಹೆಚ್ಚು ಸಕ್ಕರೆ ಉತ್ಪತ್ತಿ ಕೊಡುವ ತಳಿ ಕಬ್ಬನ್ನು ಉತ್ಪತ್ತಿ ಮಾಡಿದ್ದರು. ಹಾಗೂ ಈ ಸುಧಾರಿಕ ಜಾತಿಯ ಕಬ್ಬನ್ನು ಉತ್ತರ ಪ್ರದೇಶ, ಬೀಹಾರ್ ಮತ್ತು ಒರಿಸ್ಸಾಗಳಲ್ಲಿ ಸಕ್ಕರೆ ತಯಾರಿಕೆಗಾಗಿ ಬಹಳಮಟ್ಟಿಗೆ ವ್ಯವಸಾಯ ಮಾಡಲಾರಂಭಿಸಿದ್ದರು.

ಭಾರತ ಸುಂಕ ಸಮಿತಿಯು ಇದನ್ನೆಲ್ಲ ಕೂಲಂಕಷವಾಗಿ ಪರಿಶೀಲಿಸಿ ೧೯೩೧ರಲ್ಲಿ ಸರ್ಕಾರಕ್ಕೆ ಒಂದು ಸಮಗ್ರ ವರದಿ ಒಪ್ಪಿಸಿ, ಅದರಲ್ಲಿ ಭಾರತ ಸಕ್ಕರೆ ಕೈಗಾರಿಕೆಗೆ ೧೫ ವರ್ಷಗಳು ರಕ್ಷಣೆ ಕೊಡಬೇಕೆಂತಲೂ ಈ ರಕ್ಷಣಾ ಅವಧಿಯಲ್ಲಿ ಮೊದಲನೇ ಏಳು ವರ್ಷಗಳು ಭಾರತಕ್ಕೆ ಆಮದಾಗುವ ವಿದೇಶೀ ಸಕ್ಕರೆಯಮೇಲೆ ಹಂಡ್ರೆಡ್‌ವೇಟ್ ಒಂದಕ್ಕೆ ೬-೪-೦ ರೂ. ನಂತೆಯೂ, ಉಳಿದ ಎಂಟು ವರ್ಷಗಳಲ್ಲಿ ಹಂಡ್ರೆಡ್‌ವೇಟ್ ಒಂದಕ್ಕೆ ೬-೪-೦ ರೂ. ನಂತೆಯೂ ಸುಂಕ ವಿಧಿಸಬೇಕೆಂದು ಶಿಫಾರಸು ಮಾಡಿತು. ಸರ್ಕಾರ ಈ ಶಿಫಾರ್ಸನ್ನು ಅಂಗೀಕರಿಸಿ ಅದರಂತೆ ೧೯೩೨ರಲ್ಲಿ 'ಸಕ್ಕರೆ ಕೈಗಾರಿಕಾ ರಕ್ಷಣಾ ನಿಯಮವನ್ನು ಕಾನೂನಾಗಿ ಜಾರಿಗೆ ತಂದಿತು. ಇದರಿಂದ ಭಾರತ ಸಕ್ಕರೆ ಕೈಗಾರಿಕೆ ವಿದೇಶಿ ಅಗ್ಗದ ಸಕ್ಕರೆಯ ಪೈಪೋಟಿಯ ಕಾಟವಿಲ್ಲದೆ ಅಭಿವೃದ್ಧಿಗೊಳ್ಳಲು ತುಂಬ ಸಹಾಯಕವಾಯಿತು.

## ವಿಸ್ಮಯ ಪ್ರಗತಿ!

ರಕ್ಷಣೆ ಕೊಟ್ಟಮೇಲೆ ಭಾರತ ಸಕ್ಕರೆ ಕೈಗಾರಿಕೆಯಲ್ಲಿ ವಿಸ್ಮಯ ಪ್ರಗತಿ ತಲೆದೋರಿತು. ರಕ್ಷಣೆಕೊಡುವ ಮುನ್ನ ಅಂದರೆ ೧೯೩೧-೩೨ರಲ್ಲಿ ಭಾರತದಲ್ಲಿ ಒಟ್ಟು ೩೨ ಸಕ್ಕರೆ ಕಾರ್ಖಾನೆಗಳಿದ್ದುದು, ರಕ್ಷಣೆ ಕೊಟ್ಟ ಕೇವಲ ಮೂರು ವರ್ಷಗಳಲ್ಲಿ ಈ ಸಕ್ಕರೆ ಕಾರ್ಖಾನೆಗಳ ಸಂಖ್ಯೆ ೧೩೦ಕ್ಕೆ ಏರಿತು. ಅದೇರೀತಿ ಸಕ್ಕರೆ ಉತ್ಪತ್ತಿಯು ೪,೭೮,೦೦೦ ಟನ್ನುಗಳಿಂದ ೫,೭೮,೦೦೦ ಟನ್ನುಗಳಿಗೆ ಹೆಚ್ಚಿತು. ಇದರಿಂದ ಭಾರತದಲ್ಲಿ ಸಕ್ಕರೆ ಪೂರೈಕೆಯ ಸ್ಥಿತಿ ಬಹಳ ಸುಧಾರಿಸಿತಲ್ಲದೆ, ಸಕ್ಕರೆ ಆಮದಿನ ಪ್ರಮಾಣ ಬಹಳ ಕಡಿಮೆಯಾಗಿ, ನಮ್ಮ ಸಕ್ಕರೆಕೈಗಾರಿಕೆ ಪ್ರಗತಿಯ ಹಾದಿಯಲ್ಲಿ ಮುನ್ನುಗ್ಗಿದಂತಾಯಿತು. ಭಾರತವು ಪ್ರಪಂಚದ ಭಾರಿ ಸಕ್ಕರೆ ಉತ್ಪತ್ತಿ ಕೇಂದ್ರಗಳಲ್ಲಿ ಒಂದಾಯಿತು. ಈ ಹೊಸ ಕಾರ್ಖಾನೆಗಳ ಸ್ಥಾಪನೆಗಾಗಿ ಈ ಅವಧಿಯಲ್ಲಿ ಭಾರತಕ್ಕೆ ಸುಮಾರು ೮೦ ದಶಲಕ್ಷ ರೂಪಾಯಿ ಬೆಲೆ ಬಾಳುವ ಸಕ್ಕರೆ ಯಂತ್ರಗಳನ್ನು ತರಿಸಿಕೊಳ್ಳಲಾಯಿತು. ನಮ್ಮ ಮಂಡ್ಯದ ಸಕ್ಕರೆ ಕಂಪೆನಿ ಸ್ಥಾಪಿತವಾದುದೂ ಈ ಸಮಯದಲ್ಲಿಯೇ. (೧೯೩೩ರಲ್ಲಿ.)

## ರಕ್ಷಣೆ ಕೊಟ್ಟಮೇಲೆ ವಿವಿಧ ವರ್ಷಗಳಲ್ಲಿ ಭಾರತ ಸಕ್ಕರೆ ಕೈಗಾರಿಕೆಯ ಪ್ರಗತಿ ಸಾಧನೆ

| ವರ್ಷ | ಸಕ್ಕರೆ ಕಾರ್ಖಾನೆಗಳ ಸಂಖ್ಯೆ | ಕಬ್ಬಿನ ವ್ಯವಸಾಯ ಎಕರೆಗಳಲ್ಲಿ | ಸಕ್ಕರೆ ಉತ್ಪತ್ತಿ ಟನ್ನುಗಳಲ್ಲಿ |
|---|---|---|---|
| ೧೯೩೧-೩೨ | ೩೨ | ೩೦,೭೭,೦೦೦ | ೪,೭೮,೦೦೦ |
| ೧೯೩೨-೩೩ | ೫೭ | ೩೪,೨೫,೦೦೦ | ೬,೪೫,೦೦೦ |
| ೧೯೩೩-೩೪ | ೧೧೨ | ೩೪,೨೨,೦೦೦ | ೪,೫೪,೦೦೦ |
| ೧೯೩೪-೩೫ | ೧೩೦ | ೩೬,೦೨,೦೦೦ | ೫,೭೮,೦೦೦ |
| ೧೯೩೫-೩೬ | ೧೩೭ | ೪೧,೫೪,೦೦೦ | ೧೧,೦೫,೦೦೦ |
| ೧೯೩೬-೩೭ | ೧೪೦ | ೪೫,೭೩,೦೦೦ | ೧೨,೫೪,೦೦೦ |

ಈ ಮೇಲ್ಕಂಡ ಅಂಕಿ ಅಂಶಗಳನ್ನು ಗಮನಿಸಿದರೆ ಸಕ್ಕರೆ ಕೈಗಾರಿಕೆಯ ಪ್ರಗತಿಯು ಎಷ್ಟು ಶೀಘ್ರವಾಗಿ ನಡೆದಿದೆ ಎಂಬುದು ಗೋಚರವಾಗದೆ ಇರದು. ಭಾರತ ೧೯೩೨ರಲ್ಲಿ ಸಕ್ಕರೆ ಬಗ್ಗೆ ಕೊರತೆಯ (Deficit) ಪ್ರದೇಶವಾಗಿದ್ದುದು, ೧೯೩೭ರಲ್ಲಿ ಹೆಚ್ಚುವರಿ (Surplus) ಪ್ರದೇಶವಾಗಿ ಪರಿಣಮಿಸಿತು. ಸಕ್ಕರೆ ಕೈಗಾರಿಕೆಯೇನೋ ಶೀಘ್ರವಾಗಿ ಅಭಿವೃದ್ಧಿ ಸಾಧಿಸಿತು, ಆದರೆ ಈ ಅಧಿಕ ಸಕ್ಕರೆ ಉತ್ಪತ್ತಿಯ ಜೊತೆಗೆ ಹಲವು ಕಠಿನ ಸಮಸ್ಯೆಗಳೂ ತಲೆದೋರಿದವು. ರಕ್ಷಣೆ ಕೊಟ್ಟ ಕೆಲವೇ ವರ್ಷಗಳಲ್ಲಿ ಈ ಸಮಸ್ಯೆಗಳು ತಲೆದೋರುತ್ತವೆಂದು ಯಾರೂ ನಿರೀಕ್ಷಿಸಿರಲಿಲ್ಲ. ಈ ಸಮಸ್ಯೆಗಳ ಫಲವಾಗಿ ನಮ್ಮ ಸಕ್ಕರೆ ಕೈಗಾರಿಕೆಯು ಬದುಕಬೇಕಾದರೆ ಭಾರತದಲ್ಲಿ ಉತ್ಪತ್ತಿಯಾಗುವ ಹೆಚ್ಚುವರಿ ಸಕ್ಕರೆಯನ್ನೆಲ್ಲ ರಫ್ತು ಮಾಡಬೇಕಾಯಿತು, ಇಲ್ಲ ಸಕ್ಕರೆಯ ಉತ್ಪತ್ತಿಯ ಮೇಲಿನ ಹತೋಟಿ ಅನಿವಾರ್ಯವಾಯಿತು. ಇದನ್ನು ಗ್ರಹಿಸಿ ಆಗಿನ ಸರ್ಕಾರ, ಸಕ್ಕರೆ ಉತ್ಪತ್ತಿಗೆ ಪ್ರಮುಖ ಕೇಂದ್ರಗಳಾದ ಬೀಹಾರ್ ಮತ್ತು ಉತ್ತರ ಪ್ರದೇಶಗಳಲ್ಲಿ ಹೊಸಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸುವುದೇ ಆಗಲಿ, ಇರುವ ಸಕ್ಕರೆ ಕಾರ್ಖಾನೆಗಳನ್ನು ವಿಸ್ತರಿಸುವುದೇ ಆಗಲಿ ನ್ಯಾಯಬಾಹಿರವೆಂದು ಸಾರಿತು. ಅಲ್ಲದೆ ಸಕ್ಕರೆ ಕೈಗಾರಿಕೆ ಗಳಿಸುವ ಲಾಭದಲ್ಲಿ ಕಬ್ಬು ಸರಬರಾಜು ಮಾಡುವ ರೈತನಿಗೂ ಒಂದು ಪಾಲು ಇರಬೇಕೆಂಬ ದೃಷ್ಟಿಯಿಂದ, ಕಾರ್ಖಾನೆಗೆ ರೈತರು ಸರಬರಾಜುಮಾಡುವ ಕಬ್ಬಿನ ಕನಿಷ್ಠ ಪರಿಮಿತಿ ಬೆಲೆಯನ್ನು

ಗೊತ್ತು ಮಾಡಲು ಸರ್ಕಾರ ನಿರ್ಧರಿಸಿತು. ಮತ್ತು ಸರ್ಕಾರಕ್ಕೆ ಈ ಕೈಗಾರಿಕೆಯಿಂದ ಸ್ವಲ್ಪ ವರಮಾನ ಕಲ್ಪಿಸುವ ಉದ್ದೇಶದಿಂದ ಸಕ್ಕರೆ ಉತ್ಪತ್ತಿಯಮೇಲೆ ಸ್ವಲ್ಪ ಸುಂಕವನ್ನೂ ಹೇರಿತು. ಸಕ್ಕರೆ ಕಾರ್ಖಾನೆಗಳು ಹೆಚ್ಚಿ ಸಕ್ಕರೆ ಉತ್ಪತ್ತಿಯು ಅಧಿಕವಾದುದರ ದೆಸೆಯಿಂದ, ದೇಶದಲ್ಲಿ ಸಕ್ಕರೆ ದಾಸ್ತಾನು ಬಹಳವಾಗಿ ಹೋಯಿತು. ಇದರ ಫಲವಾಗಿ ಸಕ್ಕರೆ ಬೆಲೆಯು ಬಿದ್ದುಹೋಗಿ ಸಕ್ಕರೆ ಉದ್ಯಮಿಗಳಿಗೆ 'ಮುಂದೇನು ಗತಿ?' ಎಂಬ ಭೀತಿ ಅಂಕುರಿಸಿತು. ಈ ಹಲವಾರು ಸಮಸ್ಯೆಗಳ ಪರಿಹಾರಕ್ಕೆ ಸಕ್ಕರೆ ಉದ್ಯಮಿಗಳೆಲ್ಲ ಸೇರಿ ೧೯೩೭ರಲ್ಲಿ 'ಇಂಡಿಯನ್ ಷುಗರ್ ಸಿಂಡಿಕೇಟ್' (Indian Sugar Syndicate) ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿದರು. ಈ ಸಂಸ್ಥೆ ಸ್ಥಾಪಿಸುವುದರ ಉದ್ದೇಶ ಮುಖ್ಯವಾಗಿ ಇಷ್ಟು. ಸದಸ್ಯ ಸಕ್ಕರೆ ಕಾರ್ಖಾನೆಗಳ ಸಕ್ಕರೆ ವ್ಯಾಪಾರಕ್ಕೆ ತಕ್ಕ ವ್ಯವಸ್ಥೆ ಮಾಡಿಕೊಡುವುದು ಮತ್ತು ಆಗಾಗ್ಗೆ ಸಕ್ಕರೆಯ ಮಾರುಕಟ್ಟೆಯ ಪರಿಸ್ಥಿತಿ ನೋಡಿ ಸಕ್ಕರೆಯ ಬೆಲೆಯನ್ನು ನಿರ್ಧರಿಸುವುದು, ಸಕ್ಕರೆ ಉತ್ಪತ್ತಿಗಾರರು, ಕಬ್ಬು ಬೆಳೆಯುವವರು, ಹಾಗೂ ಸಕ್ಕರೆ ಬಳಸುವವರಿಗೆ ಸಮನಾದ ಅನುಕೂಲ ದೊರೆತು ಸಕ್ಕರೆ ಕೈಗಾರಿಕೆ ಉದ್ಧಾರವಾಗುವುದಲ್ಲದೆ, ಒಟ್ಟಿನಲ್ಲಿ ದೇಶಕ್ಕೇ ಹಿತವಾಗುವುದೆಂದೆಣಿಸಿ ಭಾರತ ಸರ್ಕಾರ ಈ ಸಂಸ್ಥೆಯ ಸ್ಥಾಪನೆಗೆ ಒಪ್ಪಿಗೆ ಕೊಟ್ಟಿತು. ಈ ಸಂಸ್ಥೆ ಸ್ಥಾಪನೆಯಾದ ಮೇಲೆ ಸಕ್ಕರೆ ಕೈಗಾರಿಕೆಯ ಸ್ಥಿತಿ ಎಷ್ಟೋ ಸುಧಾರಿಸಿತು. ಸಕ್ಕರೆ ಬೆಲೆಯು ಕ್ರಮೇಣ ಹೆಚ್ಚಾಗಿ ಸಕ್ಕರೆ ಕೈಗಾರಿಕೆಯು ಪುನಃ ಚೇತರಿಸಿಕೊಂಡಿತು. ಅಲ್ಲಿಂದ ಮುಂದಕ್ಕೆ ಇಲ್ಲಿಯವರೆಗೂ ಈ ಕೈಗಾರಿಕೆಯ ಇತಿಹಾಸದಲ್ಲಿ ಉಬ್ಬರ ವಿಳಿತಗಳಿದ್ದೇ ಇದೆ. ಈ ಮುಂದೆ ಕೊಟ್ಟಿರುವ ಪಟ್ಟಿಯಿಂದ ಅದನ್ನು ತಿಳಿಯಬಹುದು.

### ವಿವಿಧ ವರ್ಷಗಳಲ್ಲಿ ಭಾರತ ಸಕ್ಕರೆ ಕೈಗಾರಿಕೆಯು ವಿಹಂಗಮ ಒಳನೋಟ

| ವರ್ಷ | ಸಕ್ಕರೆ ಕಾರ್ಖಾನೆಗಳ ಸಂಖ್ಯೆ | ಕಬ್ಬಿನ ವ್ಯವಸಾಯ ಎಕರೆಗಳಲ್ಲಿ | ಸಕ್ಕರೆ ಉತ್ಪತ್ತಿ ಟನ್ನುಗಳಲ್ಲಿ | ಹೊಸ ಜಾತಿಯ ಕಬ್ಬಿನ ವ್ಯವಸಾಯ ಎಕರೆಗಳಲ್ಲಿ |
|---|---|---|---|---|
| ೧೯೩೭-೩೮ | ೧೩೬ | ೩೯,೪೩,೦೦೦ | ೧೦,೭೩,೦೦೦ | ೨೯,೬೮,೦೦೦ |
| ೧೯೩೮-೩೯ | ೧೩೯ | ೩೧,೦೪,೦೦೦ | ೭,೬೫,೦೦೦ | ೨೬,೭೩,೦೦೦ |
| ೧೯೩೯-೪೦ | ೧೩೮ | ೩೭,೮೨,೦೦೦ | ೧೧,೧೪,೦೦೦ | ೨೮,೯೩,೦೦೦ |
| ೧೯೪೦-೪೧ | ೧೪೦ | ೪೭,೧೦,೦೦೦ | ೯,೪೪,೦೦೦ | ೩೫,೨೯,೦೦೦ |
| ೧೯೪೧-೪೨ | ೧೪೧ | ೩೬,೨೨,೦೦೦ | ೯,೬೨,೦೦೦ | ೨೮,೩೧,೦೦೦ |
| ೧೯೪೨-೪೩ | ೧೪೧ | ೩೭,೫೫,೦೦೦ | ೧೧,೩೮,೦೦೦ | ೩೦,೦೪,೦೦೦ |
| ೧೯೪೩-೪೪ | ೧೪೫ | ೮೨,೬೮,೦೦೦ | ೧೨,೯೬,೦೦೦ | ೩೫,೪೬,೦೦೦ |
| ೧೯೪೪-೪೫ | ೧೩೬ | ೩೯,೬೧,೦೦೦ | ೧೦,೯೯,೦೦೦ | ೩೬,೦೪,೦೦೦ |
| ೧೯೪೫-೪೬ | ೧೩೨ | ೩೮,೪೭,೦೦೦ | ೧೦,೦೩,೦೦೦ | ೨೫,೮೯,೦೦೦ |
| ೧೯೪೬-೪೭ | ೧೩೫ | ೪೧,೧೮,೦೦೦ | ೧೦,೩೪,೦೦೦ | Not available |
| ೧೯೪೭-೪೮ | ೧೩೪ | ೩೫,೮೩,೦೦೦ | ೧೧,೧೬,೦೦೦ | |
| ೧೯೪೮-೪೯ | ೧೩೪ | ೩೬,೪೫,೦೦೦ | ೧೦,೦೦,೦೦೦ | |
| ೧೯೪೯-೫೦ | ೧೩೪ | ೩೪,೦೦,೦೦೦ | ೧೧,೦೦,೦೦೦ | |

(ಮುಂದುವರಿಯುವದು)

# ಮುದ್ದಣ ಕವಿಯ ಅದ್ಭುತ ರಾಮಾಯಣಂ *

ಕನ್ನಡ ಸರಸ್ವತಿ ಆರಾಧಕರಿಲ್ಲದೆ ಮಲಿನ ವಸನ ಧಾರಿಣಿಯಾಗಿ ಮ್ಲಾನವದನೆಯಾಗಿದ್ದ ಕಾಲದಲ್ಲಿ ಆಕೆಯ ಪೂಜೆಯನ್ನು ಕೈಗೊಂಡು, ಸೊಗಸಾದ ನುಡಿಗಬ್ಬಗಳ ಹೂಮಾಲೆ ಕಟ್ಟಿ, ದೇವಿಯನ್ನು ಅಲಂಕರಿಸಿ, ಆಕೆಯ ವೈಸಿರಿಯನ್ನು ಹೆಚ್ಚಿಸಿ ಧನ್ಯನಾದ ಕವಿ ಮುದ್ದಣ. ಹೇಳಿದ ಕಥೆಗಳು ಹಳೆಯವೇ ಆದರೂ ಹೇಳುವ ರೀತಿಯಲ್ಲಿ ನವ್ಯತೆ ತೋರಿ ಕನ್ನಡ ಸಾಹಿತ್ಯದಲ್ಲಿ ಹೊಸ ಸಂಪ್ರದಾಯವೊಂದಕ್ಕೆ ಆಚಾರ್ಯನೆನ್ನಿಸಿಕೊಂಡವನು ಮುದ್ದಣ. ಪದ್ಯಕ್ಕಿಂತ ಗದ್ಯವೇ ಲೇಸೆಂಬ ತತ್ತ್ವವನ್ನು ಹಿಡಿದು ಲೋಕೋತ್ತರವಾದ ಗದ್ಯಕಾವ್ಯಗಳನ್ನು ರಚಿಸಿ ಹೆಸರಾದವನು ಮುದ್ದಣ. ವೃತ್ತಿಯಲ್ಲಿ ಅಂಗಸಾಧನೆಯ ಉಪಾಧ್ಯಾಯನಾಗಿದ್ದರೂ ಸಾಹಿತ್ಯದ ಗರಡಿಯಲ್ಲಿ ಕಸರತ್ತು ಮಾಡಿ ಕನ್ನಡ ಮಲ್ಲನೆಂದು ಹೊಗಳಿಸಿಕೊಂಡವನು ಮುದ್ದಣ. ಮೂವತ್ತು ವರ್ಷವೇ ಬದುಕಿದ್ದರೂ ಒಂದು ಇಡಿಯ ಜೀವಮಾನದ ಕೃಷಿಯಿಂದ ದೊರಕಿಸಿಕೊಳ್ಳಬಹುದಾದ ಸಾಹಿತ್ಯ ಸಿದ್ಧಿಯನ್ನು ಪ್ರಕಾಶಪಡಿಸಿ ಅಕಾಲಿಕವಾಗಿ ಕಾಲನ ಮಡಿಲಿಗೆ ಸಂದವನು ಮುದ್ದಣ.

ಮುದ್ದಣನನ್ನು ನೆನೆದಾಗಲೆಲ್ಲ ಅಂತಃಕರಣ ತುಂಬಿ ಬರುತ್ತದೆ, ಕಣ್ಣು ಹನಿಗೂಡುತ್ತದೆ. ಕವಿತಾ ಬೀಜ ಯಾರಲ್ಲಿ ಅಜನ್ಮಸಿದ್ಧವಾಗಿತ್ತೋ, ಯಾರು ನೂತನ ಮಾರ್ಗವನ್ನು ಹುಡುಕುವುದಕ್ಕೆ ಆರಂಭಿಸಿ ಆ ದಿಕ್ಕಿನಲ್ಲಿ ಕೃತಿರಚನೆಗೆ ತೊಡಗಿದ್ದನೋ ಅಂಥ ವರಕವಿ ಕೇವಲ ಚಿಕ್ಕ ವಯಸ್ಸಿನಲ್ಲೇ ತೀರಿಕೊಂಡದ್ದು ಕನ್ನಡದ ದೌರ್ಭಾಗ್ಯ. ಮುದ್ದಣ ಇದುವರೆಗೆ ಬದುಕಿದ್ದು (ಇದ್ದಿದ್ದರೆ ಆತನಿಗೆ ಈಗ ೮೩ ವರ್ಷ ವಯಸ್ಸಾಗಿರುತ್ತಿತ್ತು.) ಕೃತಿ ವಿರಚಿಸಿದ್ದರೆ ಕನ್ನಡ ಸಾಹಿತ್ಯದ ಸ್ವರೂಪವೇ ಬದಲಾವಣೆ ಹೊಂದುತ್ತಿತ್ತೆಂಬುದು ನಿರ್ವಿವಾದ.

ಮುದ್ದಣನಿಗೆ ಮೊದಲಿನಿಂದಲೂ ಹಳಗನ್ನಡದಲ್ಲಿ ಅತಿಶಯವಾದ ಅಭಿಮಾನ. ಆತನಿಗೆ "ಶಬ್ದಮಣಿದರ್ಪಣ ಮುಂತಾದ ವ್ಯಾಕರಣಗಳು ನಿತ್ಯದ ಪಾರಾಯಣ ಪುಸ್ತಕಗಳು, ನಿರಂತರವಾದ ಅಭ್ಯಾಸವೇ ಔಪಾಸನೆ, ಹಳಗನ್ನಡ ಭಾಷಾ ವಾಗ್ದೇವಿಯೇ ಇಷ್ಟದೇವತೆ, ಇವುಗಳಲ್ಲಿ ಅತ್ಯಾಸಕ್ತಿಯೇ ದೃಢಭಕ್ತಿ." ಆದ್ದರಿಂದ ಇಂಥ ಏಕಾಗ್ರವಾದ ನುಡಿನೋಂಪಿಗೆ ಮೆಚ್ಚಿ ಆ ದೇವಿ ಆತನಿಗೆ ಒಲಿದದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ತಾರುಣ್ಯದಲ್ಲಿಯೇ ಹುಟ್ಟಿದ ಕಾವ್ಯರಚನಾಪೇಕ್ಷೆಯ ಸಸಿಗೆ ನೀರೆರೆಯುವಂಥ ಗುರುಗಳೂ ದೊರೆತರು. "ರತ್ನಾವತೀ ಕಲ್ಯಾಣ" "ಕುಮಾರ ವಿಜಯ" ಮುಂತಾದ ಯಕ್ಷಗಾನ ಪ್ರಸಂಗಗಳನ್ನು ರಚಿಸಿ ಹೊಳಪುಗೊಂಡು, ಸಂತತವಾದ ಕಾವ್ಯಾಭ್ಯಾಸದಿಂದ ಹರಿತವಾದ ಆ ಬುದ್ಧಿ "ಅದ್ಭುತ ರಾಮಾಯಣ" "ರಾಮ ಪಟ್ಟಾಭಿಷೇಕ" ಮತ್ತು "ರಾಮಾಶ್ವಮೇಧ" ಮುಂತಾದ ಶ್ರೇಷ್ಠ ಕೃತಿಗಳನ್ನು ನಿರ್ಮಿಸಿತು.

ಮುದ್ದಣನ ಈ ಮೂರು ಗ್ರಂಥಗಳಲ್ಲಿ ಮೊದಲನೆಯದೇ 'ಅದ್ಭುತ ರಾಮಾಯಣ'. ಇದು ಗದ್ಯಕೃತಿ. ಇದಕ್ಕೆ ಆಕರವಾದ ಸಂಸ್ಕೃತದ ಗ್ರಂಥ ಸೀತಾದೇವಿಯ ಮಹಿಮೆಗಳನ್ನು ವಿಸ್ತಾರವಾಗಿ ನಿರೂಪಿಸುವ ಒಂದು ಶಾಕ್ತ ಪುರಾಣ. ಕವಿ ಇದನ್ನು ಅನುವಾದ ಮಾಡುವಲ್ಲಿ ಭಾಷಾಂತರದಾಸ್ಯವನ್ನು ತೋರಿಸದೆ ಸ್ವತಂತ್ರವೂ ರಸಿಕಜನಸಮ್ಮತವೂ ಆದ ನವೀನ ದೃಷ್ಟಿಯನ್ನು ವ್ಯಕ್ತಪಡಿಸಿದ್ದಾನೆ. ಮೂಲದಲ್ಲಿರುವ ಜಟಿಲವಾದ ವೇದಾಂತಭಾಗಗಳನ್ನು ಬಹುಮಟ್ಟಿಗೆ ಕಡಮೆ ಮಾಡಿ, ರಸವ್ಯಂಜನೆಗೆ ಸಾಧಕವಾದ ಭಾಗಗಳನು ಬೆಳಸಿ, ಚರ್ವಿತಚರ್ವಣಗಳನ್ನು ಹಾರಿಸಿ, ಹತು ಮಾತನ್ನು ಒಂದೆರಡು ಮಾತಿನಲ್ಲಿ ನುಡಿದು ಕೃತಿಯನ್ನು ಅಡಕವಾಗಿ ಬರೆದಿದ್ದಾನೆ. ಕವಿಯ ಪ್ರತಿಭೆಯೊಡನೆ ಉತ್ತಮ ಸಂಗ್ರಹಕಾರನ ಒಂದು ಔಚಿತ್ಯ ಜ್ಞಾನವೂ ಸೇರಿ ಈ ಕಥೆಯನ್ನು ರಸವತ್ಕೃತಿಯನ್ನಾಗಿ ಮಾಡಿದೆ.

'ರಾಮ ಪಟ್ಟಾಭಿಷೇಕ'ದ ಪ್ರೌಢಿಮೆ ಗಾಂಭೀರ್ಯಗಳಾಗಲಿ 'ರಾಮಾಶ್ವಮೇಧ'ದ ಲಾಲಿತ್ಯ ಸುಭಗತೆಗಗಳಾಗಲಿ ಅದ್ಭುತರಾಮಾಯಣದಲ್ಲಿ ಕಂಡು ಬರದಿದ್ದರೂ ಈ ಗ್ರಂಥ ತಿರುಳ್ಗನ್ನಡದ ಬೆಡಗಿನ ನುಡಿಗಳನ್ನೂ ಕ್ಲೇಶವಲ್ಲದ ಹಿತಮಿತವಾದ ವಾಕ್ಯಸರಣಿಯನ್ನೂ ರಸೋಲ್ಲಸಿತವಾದ ಸುಸಂದರ್ಭಗಳನ್ನೂ ಒಳಕೊಂಡು, ಆಗಿನ

---

* ಮುದ್ದಣ ಕವಿಯ ಅದ್ಭುತ ರಾಮಾಯಣಂ: ಕ್ರೌನ್ ಅಷ್ಟಪತ್ರ, ೪+೬೪+೮೨ ಪುಟಗಳು, ಸಂಪಾದಕರು : ಶ್ರೀ ಎಸ್. ವಿ. ಪರಮೇಶ್ವರಭಟ್ಟ, ಎಂ.ಎ., ಪ್ರಕಾಶಕರು : ಉಷಾ ಸಾಹಿತ್ಯ ಮಾಲೆ, ಮೈಸೂರು. ಬೆಲೆ : ೨ ರೂಪಾಯಿ.

ಕಾಲಕ್ಕೆ ವಿನೂತನವಾದ ಒಂದು ಶೈಲಿಯಲ್ಲಿ ರಚಿತವಾಗಿ ತನ್ನದೇ ಆದ ವೈಶಿಷ್ಟ್ಯದಿಂದ ಮೆರೆಯುತ್ತಿದೆ. ಹಳಗನ್ನಡವನ್ನು ಅಭ್ಯಾಸಮಾಡಬೇಕೆಂಬ ಕುತೂಹಲವುಳ್ಳವರಿಗೆ 'ಅದ್ಭುತರಾಮಾಯಣ' ನಿಜವಾಗಿ ಬಾಲಬೋಧೆ. ಮುಂದೆ ಪ್ರೌಢವಾದ ಹಳಗನ್ನಡದ ಗ್ರಂಥಗಳನ್ನು ವ್ಯಾಸಂಗ ಮಾಡುವುದಕ್ಕೆ ಇದಕ್ಕಿಂತ ಉತ್ತಮವಾದ ಪ್ರವೇಶ ಬೇರೆ ದೊರೆಯಲಾರದು. ಈ ದೃಷ್ಟಿಯಿಂದ ಈ ಕಾವ್ಯ ಶ್ಲಾಘ್ಯ, ಪರಿಗ್ರಾಹ್ಯ.

ಇಂಥ ಸೊಗಸಾದ ಕೃತಿಯನ್ನು ಶ್ರೀ ಎಸ್. ವಿ. ಪರಮೇಶ್ವರಭಟ್ಟರು ಸಂಪಾದನ ಮಾಡಿದ್ದಾರೆ. ಮುದ್ದಣ ಕವಿಯ ಜೀವನಕ್ಕೆ ಸಂಬಂಧಪಟ್ಟ ವಿಷಯಗಳನ್ನು ನಾನಾ ಗ್ರಂಥ—ಲೇಖನಗಳಿಂದ ಸಂಗ್ರಹಿಸಿ ಸುಮಾರು ೭೪ ಪುಟಗಳಲ್ಲಿ ಕವಿಯ ಪರಿಚಯಮಾಡಿಕೊಟ್ಟು ಗ್ರಂಥ ವಿಮರ್ಶೆ ಮಾಡಿದ್ದಾರೆ. ಸಂಸ್ಕೃತ ಮೂಲವನ್ನೂ ಕನ್ನಡ ಅನುವಾದವನ್ನೂ ತುಲನಮಾಡಿ, ವಿಮರ್ಶೆಯ ನಿಕಷಕ್ಕೆ ಇಟ್ಟು, ಕನ್ನಡದ ಈ ಕೃತಿ ಹೇಗೆ ಸರ್ವಾದರಣೀಯವಾಗಿದೆಯೆಂಬುದನ್ನು ಸಾಧಾರವಾಗಿ ತೋರಿಸಿದ್ದಾರೆ. ಶ್ರೀ ಭಟ್ಟರ ಈ ಪರಿಶ್ರಮ ಅಭಿನಂದನಾರ್ಹವಾದದ್ದು.

ಹಿಂದೆ 'ಕಾವ್ಯಕಲಾನಿಧಿ' ಗ್ರಂಥಮಾಲೆಯಲ್ಲಿ ಪ್ರಕಟವಾಗಿ ಯುಕ್ತ ವ್ಯಾಖ್ಯಾನ ವಿವರಣಗಳಿಲ್ಲದೆ ಬರಿಯ ಟಿಪ್ಪಣಿ ಮಾತ್ರವನ್ನೊಳಗೊಂಡಿದ್ದ ಈಗ್ರಂಥದ ಅವತರಣವನ್ನು ಶ್ರೀಭಟ್ಟರು ಸಂಪಾದನ ಮಾಡಿ ವಿಸ್ತಾರವಾದ ಕವಿ ಪರಿಚಯ, ಗ್ರಂಥ ವಿಮರ್ಶೆ, ಮುದ್ದಣ ಕವಿಯ ಜೀವನದ ಕೆಲವು ಮುಖ್ಯ ವರ್ಷಗಳು, ಟಿಪ್ಪಣಿ, ಶಬ್ದಕೋಶ ಮುಂತಾದವುಗಳಿಂದ ಪರಿಪುಷ್ಟಿಗೊಳಿಸಿ, ಅದ್ಯತನೀಯವನ್ನಾಗಿ ಮಾಡಿ, ಉಪಕಾರ ಮಾಡಿದ್ದಾರೆ. ಕವಿಯಲ್ಲಿ ಅನನ್ಯ ಭಕ್ತಿ ವಿಶ್ವಾಸಗಳುಳ್ಳ ಕನ್ನಡಿಗರೂ ಹಳಗನ್ನಡ ವ್ಯಾಸಂಗಾಪೇಕ್ಷಿ ವಿದ್ಯಾರ್ಥಿಗಳೂ ಈ ಪುಸ್ತಕದಿಂದ ತುಂಬ ಪ್ರಯೋಜನ ಪಡೆದಾರೆಂಬುದರಲ್ಲಿ ಸಂದೇಹವಿಲ್ಲ.

### ತಪೋನಂದನ : ಮಹಾಕವಿ ದರ್ಶನ *

ಕುವೆಂಪು ಕನ್ನಡನಾಡಿನ ವರಕವಿ. ಮಹಾಕವಿ ಎಂದರೂ ಸಲ್ಲುತ್ತದೆ. ಅವರದು ಗರುಡಪಕ್ಷಿಯ ದೃಷ್ಟಿ, ದೈತ್ಯ ಕಲ್ಪನೆ, ಕೊರತೆಕಾಣದ ವಾಕ್‌ಶ್ರೀ. ಸ್ವಪ್ನ ಸುಂದರವೂ ವಿಸ್ಮಯ ರಮಣೀಯವೂ ಆದ ಅವರ ಕೃತಿ ಕುಂಜದಲ್ಲಿ ವಿಹಾರ ಮಾಡುವ ಭಾಗ್ಯವಿರುವವರಿಗೆ ಈ ಮಾತಿನ ತಥ್ಯ ಸ್ಫುರಿಸೀತು. ಕುವೆಂಪು ನಿಸ್ಸಂದೇಹವಾಗಿ ಕನ್ನಡ ಕಾವ್ಯವಧುವಿನ ಲಲಾಟ ಶ್ರೀ.

ಕವಿಯ ಸಾಹಸ ಕವಿಗೇ ಮೆಚ್ಚಿಕೆ. ಅವನ ಜಾಡನ್ನು ಇವನೇ ಬಲ್ಲ. ಕಾದಂಬರೀಕಾವ್ಯದ ಮಹಾಶ್ವೇತೆಯ ತಪಸ್ಸನ್ನು ಚಿತ್ರಿಸುವಾಗ, ಪಂಪನಲ್ಲಿ ಭವ್ಯತೆಯನ್ನು ಕಾಣುವಾಗ, ಸರೋವರದ ಸಿರಿಗನ್ನಡಿಯಲ್ಲಿ ಕವಿಪ್ರತಿಭೆಯನ್ನು ದರ್ಶನಮಾಡುವಾಗ, ಋಷಿ ವಾಲ್ಮೀಕಿಯ ಕಾವ್ಯಜಾಹ್ನವಿಯಲ್ಲಿ ಮೀಯುವಾಗ ಕುವೆಂಪು ಅಲೌಕಿಕವಾದ ಒಂದು ವಾತಾವರಣವನ್ನು ಕಲ್ಪಿಸುತ್ತಾರೆ ; ಅಪೂರ್ವಸುಂದರವಾದ ವಾಗ್ವಿಲಾಸವನ್ನು ಮೆರೆಯುತ್ತಾರೆ ; ಯಾರೂ ಏರದ ಕಾವ್ಯಶ್ರೀರೋಹಣದ ಎತ್ತರಕ್ಕೆ ಏರುತ್ತಾರೆ. ಕವಿಗೆ ಕವಿ ಹೊಯ್‌ಕೈ ಎಂಬ ಭಾವವನ್ನು ವಾಚಕರಲ್ಲಿ ಮೂಡಿಸುತ್ತಾರೆ.

ಈ ಸುಖಸುಧೆಯನ್ನು ಸವಿಯಬೇಕಾದರೆ 'ತಪೋನಂದನ'ಕ್ಕೇ ಯಾತ್ರೆ ಹೋಗಬೇಕು. ಕವಿ ಪ್ರತಿಭೆ ನಿರ್ಮಿಸಿರುವ ಆ ತಪೋನಂದನವಾದರೂ ಎಂಥದು ? ಅಲ್ಲಿ ಮಹಾಶ್ವೇತೆ ತಪಸ್ಸು ಮಾಡುತ್ತಾಳೆ. "ಸ್ಮರದ್ರೂಪಿಯಾದರೂ ಅಳೀಕಕಾಮಿಯಾದ ವೈಶಂಪಾಯನನನ್ನು ವಿಸರ್ಜಿಸಿ ಆ ಮಹಾಶ್ವೇತೆ ಜನಕಕನ್ಯೆಗೆ ಹೆಗಲೆಣೆಯಾಗಿದ್ದಾಳೆ." ಅವಳ ದರ್ಶನಭಾಗ್ಯ ನಮ್ಮದಾಗುತ್ತದೆ. ಅಲ್ಲೇ ಒಂದು ಕಡೆ ಅಚ್ಛೋದವಿದೆ, ವೈಶಂಪಾಯನವಿದೆ. ಆ ಸರೋವರಗಳ ಶುಭ್ರಶೀತಲವಾರಿಯಲಿ ಮಿಂದು ಧನ್ಯರಾಗಿ, ಆ ಪುರಾಣ ಪುಣ್ಯವಾತಾವರಣದಲ್ಲಿ ಪಾಪದೂರರಾಗುತ್ತೇವೆ. ಅಲ್ಲಿ ಪಂಪನ ಭವ್ಯತೆಯನ್ನು ಕಾಣುತ್ತೇವೆ. ಅವನ ಭೂಮಚಿತ್ರಗಳನ್ನು ನೋಡಿ, ದೃಶ್ಯ ತ್ರಿವಿಕ್ರಮನನ್ನು ದೃಷ್ಟಿಸಿ ರಸಮೂರ್ಛಿತರಾಗುತ್ತೇವೆ. ಆ ತಪೋವನದ ಬೇರೊಂದೆಡೆಯಲ್ಲಿ ವಾಲ್ಮೀಕಿಯ ಕಾವ್ಯಜಾಹ್ನವಿ ಹರಿಯುತ್ತಾಳೆ. ಆಕೆಯ ಪವಿತ್ರ ಗರ್ಭದಲ್ಲಿ ರಾಮಾಯಣದ ರಸಸ್ರೋತವನ್ನು ಕಂಡು ಪುನೀತರಾಗುತ್ತೇವೆ, ಹರ್ಷಪುಲಕಿತರಾಗುತ್ತೇವೆ. ಅತ್ತ, ಇನ್ನೊಂದೆಡೆ ಕಾಳಿದಾಸನ ಪ್ರತಿಭೆ 'ಶಾಕುಂತಲ'ವಾಗಿ— ಫಲಿತರಸಾಲವಾಗಿ— ಕಣ್ಗೊಳಿಸುವುದನ್ನು ನೋಡಿ ಮೆಚ್ಚುತ್ತೇವೆ.

---

* ತಪೋನಂದನ : (ಪ್ರಬಂಧ ಸಂಕಲನ) ಕುವೆಂಪು ; ಕ್ರೌನ್ ಅಷ್ಟಪತ್ರ ; ೧೨೫ ಪುಟಗಳು. ಪ್ರಕಾಶಕರು : ಕಾವ್ಯಾಲಯ, ಮೈಸೂರು ; ಬೆಲೆ : ೧-೧೨-೦.

ಕುವೆಂಪು ಅವರ 'ತಪೋನಂದನ' ಬರಿಯ ಒಂದು ಶುಷ್ಕ ವಿಮರ್ಶಾ ಗ್ರಂಥವಲ್ಲ. ಅದು ಕವಿ ಕಲ್ಪನೆಯಿಂದ ಉಜ್ವಲಗೊಂಡ ಪ್ರತಿಭಾನ್ವಿತ ಕೃತಿ. ಅಲ್ಲಿ ಹೆಜ್ಜೆ ಹೆಜ್ಜೆಗೂ ರಸ ಒಸರುತ್ತದೆ. ಆ ಜೇನನ್ನು ಸವಿಯುವುದಕ್ಕೂ ನಾಲಗೆ ಬೇಕು. ಅದು ರಸಿಕನ ರಸನೆಗೆ ಮಾತ್ರ ಸಾಧ್ಯ. ಇಂಥ ಕೃತಿಯಿಂದ ಯಾವುದನ್ನು ಉಲ್ಲೇಖಿಸುವುದು–ಯಾವುದನ್ನು ಬಿಡುವುದು? ರುಚಿಗಾದರೂ ಒಂದೆರಡು ಸಂದರ್ಭಗಳು ಉಲ್ಲೇಖಿಸೋಣವೆಂದರೆ ಇಡಿಯ ಕೃತಿಯ ಬಹು ಭಾಗವನ್ನೇ ಇಲ್ಲಿ ಉದ್ಧರಿಸಬೇಕಾದೀತು! ಹೆಸರಿಗೆ ವಿಮರ್ಶಾತ್ಮಕ ಪ್ರಬಂಧಗಳೆನ್ನಿಸಿಕೊಂಡಿರುವ ಈ ಸಂಕಲನ ಕವಿಕಲ್ಪನೆಯ ನಕ್ಷತ್ರಯಾತ್ರೆಯ ಸಾಹಸಕ್ಕೆ ಪ್ರಥಮ ಸಾಕ್ಷಿ. ವಾಲ್ಮೀಕಿ, ಕಾಳಿದಾಸ, ಪಂಪರಂಥ ಮಹಾ ಕವಿಗಳ ರಸರಹಸ್ಯಗಳ ಚಿದ್ದರ್ಶನ ಮಾಡಿಸುವುದಕ್ಕೂ, ಮಹೋಪಮೆಯ ಮಹತ್ತನ್ನು ಮನಮುಟ್ಟಿಸುವುದಕ್ಕೂ, ಕಲೆಯಲ್ಲಿ ಪ್ರತಿಮಾ ವಿಧಾನದ ತತ್ತ್ವಕ್ಕೆ ಆತ್ಮಾನುಭವದಿಂದ ಉಕ್ತಿಕೊಡುವುದಕ್ಕೂ ಶಕ್ತಿ ಬೇಕು. ಕುವೆಂಪು ಅವರಲ್ಲಿ ಆ ಶಕ್ತಿ ಸಾಗರ ಸದೃಶವಾಗಿದೆ.

—ಭಾ. ಪ್ರಿ.

ಶ್ರೀ ಚಿಕದೇವರಾಜ ಬಿನ್ನಪ: ಅನುವಾದಕರು: ಶ್ರೀ. ಜಿ. ಪಿ. ರಾಜರತ್ನಂ; ಪ್ರಕಾಶಕರು: ಸತ್ಯಶೋಧನ ಪುಸ್ತಕ ಭಂಡಾರ, ಬೆಂಗಳೂರು; ಕ್ರೌನ್ ಅ. ಪ. ಪು. ೧/೩; ಬೆಲೆ: ರೂ. ೧-೮-೦.

ಶ್ರೀ ಚಿಕದೇವರಾಜ ಒಡೆಯರು ಕ್ರಿ. ಶ. ೧೬೭೨ ರಿಂದ ೧೭೦೪ ರ ವರೆಗೆ ಮೈಸೂರು ದೇಶವನ್ನು ಆಳಿದ ದೊರೆಗಳು. ಇವರು ಅನೇಕ ಕವಿಗಳಿಗೆ ಆಶ್ರಯದಾತರಾಗಿದ್ದುದಲ್ಲದೆ ಸ್ವತಃ ಕವಿಗಳಾಗಿದ್ದರು. ಅವರ ಪ್ರಸಿದ್ಧವಾದ ಗ್ರಂಥಗಳು 'ಶ್ರೀ ಚಿಕದೇವರಾಜ ಬಿನ್ನಪ' ಮತ್ತು 'ಗೀತಗೋಪಾಲ.'

ಶ್ರೀ ಚಿಕದೇವರಾಜ ಒಡೆಯರು ಸುತ್ತಮುತ್ತಣ ಹಗೆಗಳನ್ನು ಅಡಗಿಸಿ, ದೇಶದಲ್ಲಿ ಶಾಂತಿಯನ್ನು ನೆಲೆಗೊಳಿಸಿ, "ಅಕ್ಷರವನ್ನು ಅರಿಯದ ಒಕ್ಕಲಿಗರಿಗೂ ಹೆಣ್ಣುಗಳಿಗೂ ಸಂಸ್ಕೃತದಿಂದ ತತ್ತ್ವ ಜ್ಞಾನವಾಗುವುದು ಅಸಾಧ್ಯ ಎಂದು– ಎಲ್ಲರೂ ತಿಳಿಯುವ ಹಾಗೆ ಕನ್ನಡ ಮಾತಿನಲ್ಲಿ ಮೆಲ್ನುಡಿಗಳಿಂದ ಅಖಿಲ ತತ್ತ್ವಾರ್ಥಗಳನ್ನು ಸಂಗತಿಗೊಳಿಸಿ" ತಮ್ಮ ಕುಲದೇವತೆಯಾದ ಯಾದವಗಿರಿಯ ನಾರಾಯಣನ ಅಡಿದಾವರೆಗಳಿಗೆ ಬಿನ್ನಹ ಮಾಡುವ ನೆಪದಲ್ಲಿ ಮೂವತ್ತು ಬಿನ್ನಪಗಳನ್ನು ಪೋಣಿಸಿದರು. ಇದೇ 'ಚಿಕದೇವರಾಜ ಬಿನ್ನಪ.'

ಇದು ಪದ್ಯಮಿಶ್ರವಾದ ಗದ್ಯಗ್ರಂಥ. ವಿಶಿಷ್ಟಾದ್ವೈತ ಸಿದ್ಧಾಂತದ ಸಾರ ಸಂಗ್ರಹದ ಕೈಪಿಡಿ; ಆ ದರ್ಶನವನ್ನು ತಿಳಿಯಬೇಕೆನ್ನುವವರಿಗೆ ಉಪಯುಕ್ತವಾದ ಗ್ರಂಥ. ಎಲ್ಲರಿಗೂ ತಿಳಿಯಬೇಕೆಂಬ ಉದ್ದೇಶದಿಂದಲೇ ಗ್ರಂಥವು ರಚಿತವಾಗಿದ್ದರೂ ಕೂಡ ಅದು ಬಿಗಿಯಾದ ಹಳಗನ್ನಡದಲ್ಲಿರುವುದರಿಂದ ಜನಸಾಮಾನ್ಯಕ್ಕೆ ಈಗಿನ ಕಾಲದಲ್ಲಿಯಂತೂ ಅರ್ಥವಾಗುವುದು ಕಷ್ಟ. ಆದ್ದರಿಂದ, ಗ್ರಂಥವನ್ನು ಸುಲಭಗೊಳಿಸಬೇಕೆಂಬ ಘನೋದ್ದೇಶದಿಂದ ಅದರ ಹೊಸಗನ್ನಡದ ಅನುವಾದವನ್ನು ಶ್ರೀ ಜಿ. ಪಿ. ರಾಜರತ್ನಂ ಅವರು ಕನ್ನಡಿಗರ ಮುಂದೆ ಇಟ್ಟಿದ್ದಾರೆ.

ಅನುವಾದ ಕಾರ್ಯದಲ್ಲಿಯೂ ವಿಷಯ ಗ್ರಹಣಕ್ಕೆ ಅವಶ್ಯವಾದ ಸಹಾಯ ಸಂಪತ್ತಿಯನ್ನು ಓದುಗರಿಗೆ ಒದಗಿಸುವುದರಲ್ಲಿಯೂ ಶ್ರೀ ರಾಜರತ್ನಂ ಅವರು ತೋರಿಸಿರುವ ಶ್ರದ್ಧೆ ಕಾರ್ಯತತ್ಪರತೆ ಕುಶಲತೆಗಳು ಅವರಿಂದ ನಾವು ನಿರೀಕ್ಷಿಸುವ ಮಟ್ಟಕ್ಕೆ ಅನುಗುಣವಾಗಿವೆ. ಮೂಲದ ಶೈಲಿಯ ಸ್ವರೂಪ ಸೌಂದರ್ಯಗಳು ಅನುವಾದದಲ್ಲಿಯೂ ಪಡಿಮೂಡಿವೆ. ಅನಿವಾರ್ಯವಾಗಿ ಉಳಿಸಿಕೊಳ್ಳಬೇಕಾಗಿ ಬಂದ ಕ್ಲಿಷ್ಟಪದಗಳಿಗೆ ಗ್ರಂಥಾಂತ್ಯದಲ್ಲಿ ಅರ್ಥವಿವರಣೆ ಕೊಟ್ಟಿರುವುದು ಬಹು ಸಹಾಯಕವಾಗಿದೆ. ಅಲ್ಲದೆ, 'ಬಿನ್ನಪ'ದಲ್ಲಿ ಅಡಕವಾಗಿ ವಿವರಿಸಿರುವ ಸಿದ್ಧಾಂತದ ತಿರುಳನ್ನು ಇನ್ನೂ ಅಡಕಮಾಡಿ, ಸುಲಭ ಗ್ರಾಹ್ಯವಾಗುವಂತೆ, ಕಡೆಯ ಎರಡು ಅನುಬಂಧಗಳಲ್ಲಿ ಛಟ್ಟಿಯಿಳಿಸಿಕೊಟ್ಟಿರುವುದು ಉಪಯುಕ್ತವಾಗಿದೆ.

'ಬಿನ್ನಪ'ದ ಈ ಹೊಸಗನ್ನಡದ ಅನುವಾದವು ವೈಷ್ಣವ ತತ್ತ್ವದಲ್ಲಿ ಪ್ರೀತಿಯುಳ್ಳವರಿಗೆ ಪ್ರಿಯವಾಗಲಿ" ಎಂದು ಲೇಖಕರು ವಿನಯದಿಂದ ಬಯಸಿದ್ದಾರೆ. ತತ್ತ್ವ ಜಿಜ್ಞಾಸುಗಳಾದ ಕನ್ನಡಿಗರಿಗೆಲ್ಲ ಪ್ರಿಯವಾಗಲೆಂದು ನಾವು ಬಯಸುತ್ತೇವೆ.

—ಎಂ. ವಿ. ಸೀ.

"ಕನ್ನಡ ಆದಿತ್ಯಪುರಾಣಂ": (ಭಾಗ ೧) ಸಂಗ್ರಾಹಕರು: ಶ್ರೀ ಕೆ. ವೆಂಕಟರಾಯಾಚಾರ್ಯರು. ಮಾಸ್ತರ್, ಕಳಾಯಿ. ದಕ್ಷಿಣ ಕನ್ನಡ ಜಿಲ್ಲಾ. ಸಂಪಾದಕರು ಮತ್ತು ಪ್ರಕಾಶಕರು: ಆಸ್ಥಾನವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ, ಶ್ರೀ ಬ. ಶಿವಮೂರ್ತಿ ಶಾಸ್ತ್ರಿಗಳು, ಬೆಂಗಳೂರು. ಪುಟಗಳು ೭೧. ಬೆಲೆ: ರೂ. ೧-೦-೦

ಸುಮಾರು ಒಂದುಸಾವಿರ ವರ್ಷಗಳಿಂದ ಕನ್ನಡ ಸಾಹಿತ್ಯವು ಹುಲುಸಾಗಿ ಬೆಳೆದು ಬಂದಿದೆಯಷ್ಟೆ. ಇನ್ನೂ

ಅದೆಷ್ಟೊ ಉತ್ತಮವಾದ ಪ್ರಾಚೀನ ಕೃತಿರತ್ನಗಳು ಬೆಳಕಿಗೆ ಬಾರದೆ ತಾಳೆಯೋಲೆಯಲ್ಲೇ ಅಡಗಿವೆ. ಕೆಲವಂತೂ ಅರಸಿಕರ ಅಜ್ಞತೆಯ ಫಲವಾಗಿ ಗೆದ್ದಲು ಹುಳುಗಳ ಆಹಾರವಾದುವು; ಆಗುತ್ತಲೂ ಇವೆ. ಪ್ರಕೃತಗ್ರಂಥವಾದ ಕನ್ನಡ ಆದಿತ್ಯಪುರಾಣವು ಕಾಲನ ದವಡೆಗೆ ಸಿಕ್ಕದೆ, ಇದುವರೆಗೆ ತಲೆಮರೆಸಿ ಕುಳಿತಿದ್ದು, ಸಂಗ್ರಾಹಕ ಮತ್ತು ಪ್ರಕಾಶಕ ಮಹಾಶಯರ ಸಾಹಿತ್ಯ ಸೇವಾಭಿಮಾನ, ಹಾಗೂ ಸಾಹಸದ ಪರಿಣಾಮವಾಗಿ ಮುದ್ರಿತವಾಗಿ ಹೊರಬಂದುದು ಕನ್ನಡ ಸಾಹಿತ್ಯ ಪ್ರೇಮಿಗಳ ಸುದೈವವೇ ಸರಿ. ಈ ಉಪಕಾರಕ್ಕಾಗಿ ಈ ಮಹನೀಯರಿಬ್ಬರೂ ಕನ್ನಡಿಗರ ಕೃತಜ್ಞತೆ ಮತ್ತು ಅಭಿನಂದನೆಗಳಿಗೆ ಪಾತ್ರರಾಗಿದ್ದಾರೆ.

ಈ ಗ್ರಂಥವು ಸಂಸ್ಕೃತ ಆದಿತ್ಯಪುರಾಣದ ಕನ್ನಡ ಭಾಷಾಂತರ. ಇದಕ್ಕೆ 'ಶಿವಕಥಾಮೃತ ಶಿವಕಾವ್ಯ' ಎಂಬ ಬೇರೊಂದು ಹೆಸರೂ ಉಂಟು. ಕ್ರಿ. ಶ ಸುಮಾರು ೧೫೫೦ ರ ಕವಿಯೊಬ್ಬನು ಭಾಮಿನೀ ಷಟ್ಪದಿ ಯಲ್ಲಿ ಇದನ್ನು ಬರೆದಿದ್ದಾನೆ. ಈತನ ಹೆಸರೇ ನೆಂಬುದು ಗ್ರಂಥದಿಂದ ತಿಳಿಯಬರುವುದಿಲ್ಲ. 'ಕವಿ ರಾಜ ಕಂಠೀರವ' ಎಂದು ತನ್ನ ಬಿರುದನ್ನು ಮಾತ್ರ ಹೇಳಿಕೊಂಡಿದ್ದಾನೆ. ಈತನು ಮೊದಲು ಬ್ರಾಹ್ಮಣ ನಾಗಿದ್ದು ಅನಂತರ ವೀರಶೈವನಾದನೆಂದು ಗ್ರಂಥಾ ಧಾರದಿಂದ ಊಹಿಸಲವಕಾಶವಿದೆ. ಮೂಲಗ್ರಂಥದಲ್ಲಿ ೨,೬೬೮ ಪದ್ಯಗಳಿವೆಯೆಂದು ಮಾನ್ಯ ಸಂಪಾದಕರು ತಿಳಿಸುತ್ತಾರೆ. ಕನ್ನಡ ಆದಿತ್ಯಪುರಾಣದ ಮೊದಲನೆಯ ಬಾಗವಾದ ಇದರಲ್ಲಿ ೩೩೯ ಪದ್ಯಗಳನ್ನೊಳಗೊಂಡ ೧೮ ಸಂಧಿಗಳಿವೆ.

ಕವಿ ಗ್ರಂಥದಲ್ಲಿ ಶಿವ ತತ್ತ್ವನಿರ್ಣಯ, ಸೃಷ್ಟಿ ಕ್ರಮ, ನಾಮಸ್ಮರಣೆಯ ಮಹತ್ವ, ಕಲಿಧರ್ಮ, ಪ್ರಾಯಶ್ಚಿತ್ತ ರಹಸ್ಯ, ಕಾಶೀಮಾಹಾತ್ಮ್ಯೆ, ದಕ್ಷಗರ್ವ ಭಂಗ, ದಾನ ಫಲ - ಮೊದಲಾದವುಗಳಿಗೆ ಸಂಬಂಧಿಸಿದ ಧರ್ಮತತ್ತ್ವಗಳನ್ನು ಸ್ಥೂಲವಾಗಿ ನಿರೂಪಿಸಿದ್ದಾನೆ. ಮಧ್ಯೆಮಧ್ಯೆ ಸಣ್ಣಸಣ್ಣ ಕಥೆಗಳೂ ಇವೆ. ಸಮ ಕಾಲೀನ ಕವಿಗಳಂತೆ ಅಚ್ಚಗನ್ನಡ ಛಂದಸ್ಸಾದ ಭಾಮಿನೀಷಟ್ಪದಿಯನ್ನು ವಿಷಯ ಪ್ರತಿಪಾದನೆಗಾಗಿ ಆರಿಸಿಕೊಂಡಿದ್ದಾನೆ. ಭಾಷೆ ಗಡುಚಾಗಿಲ್ಲ, ಕವಿತೆ ಸರಳವಾಗಿಯೂ ಸುಭಗವಾಗಿಯೂ ಇದೆ. ತಾತ್ತ್ವಿಕ ಗ್ರಂಥವಾದರೂ ಕಾವ್ಯ ಮಾಧುರ್ಯಕ್ಕೆ ಕೊರತೆಯಿಲ್ಲ.

ಒಟ್ಟಿನಲ್ಲಿ ಇದು ಕರ್ಣಾಟಕ ಸಾರಸ್ವತ ಭಕ್ತರೂ ಮೇಲಾಗಿ ಭಾವುಕರೂ ತತ್ತ್ವಜಿಜ್ಞಾಸುಗಳೂ ಸಂಗ್ರಹಿಸ ಬಹುದಾದ ಗ್ರಂಥ. ಸಂಸ್ಕೃತ ಆದಿತ್ಯಪುರಾಣವನ್ನು ಓದಲು ಭಾಷೆಯರಿಯದ ಜನರಿಗೆ ಈ ಹೊತ್ತಗೆ ಬಹಳ ಸಹಕಾರಿ.

ಪುಸ್ತಕದ ಅಚ್ಚು, ರಕ್ಷಾಪತ್ರ, ಉಪಯೋಗಿ ಸಿರುವ ಕಾಗದ, ಬೆಲೆ - ಇವು ಸಮರ್ಪಕವಾಗಿವೆ. ಓದುಗರ ಸೌಕರ್ಯಕ್ಕಾಗಿ ಕಠಿನಪದಗಳ ಅರ್ಥವೂ ಕೊಡಲ್ಪಟ್ಟಿದೆ. ಮುದ್ರಣದೋಷಗಳು ಹೇರಳವಾಗಿವೆ. ಒಪ್ಪೋಲೆಯನ್ನು ಕೊಟ್ಟಿದ್ದರೂ ಅದಕ್ಕೆ ಸಿಕ್ಕದ ತಪ್ಪುಗಳೂ ಇವೆ.

ಇಂತಹ ಪ್ರಾಚೀನವೂ, ಅಪೂರ್ವವೂ ಆದ ಗ್ರಂಥವನ್ನು ಮಾನ್ಯ ಸಂಪಾದಕರಾದ ವೇ॥ ಶ್ರೀ॥ ಶಾಸ್ತ್ರಿಗಳವರು ತಮ್ಮ ಶರಣ ಸಾಹಿತ್ಯ ಮಾಲೆಯ ೧೩ನೆಯ ಕುಸುಮವಾಗಿ ಪ್ರಕಟಿಸಿ ಕನ್ನಡ ಸರಸ್ವತಿಗೆ ಮುಡಿಸಿ ಹೆಚ್ಚಿನ ಉಪಕಾರ ಮಾಡಿದ್ದಾರೆ. ಗ್ರಂಥದ ಮೊದಲಲ್ಲಿ ಉಲ್ಲೇಖಿತವಾದ ಇವರ ಪರಿಶೋಧನಾತ್ಮಕ ವಾದ 'ಕವಿಕಾವ್ಯ ವಿಚಾರ'ವು ಗಮನಾರ್ಹವಾದು ದಲ್ಲದೆ ಗ್ರಂಥದ ಕಾಂತಿಯನ್ನೂ ಹೆಚ್ಚಿಸಿದೆ. 'ಈ ಗ್ರಂಥವನ್ನು ಶುದ್ಧವಾಗಿ ಪ್ರಕಟಿಸಲು ನಮಗೆ ಸಾಧ್ಯ ವಾಗಿಲ್ಲ' ಎಂದು ಶ್ರೀ ಶಾಸ್ತ್ರಿಗಳು ಹೇಳಿರುವರಾದರೂ ದೊರೆತ ಒಂದೇ ತಾಳಪ್ರತಿಯನ್ನು ಅತ್ಯಂತ ಶ್ರಮದಿಂದ ಪರಿಷ್ಕರಿಸಿ ಓದುಗರ ಕೈಲಿಟ್ಟುದು ಸಾಹಸದ ವಿಷಯವೇ ಸರಿ. ಕನ್ನಡ ನಾಡು ಮತ್ತು ನುಡಿಗೆ ತಮ್ಮ ಜೀವನ ವನ್ನೇ ಮುಡಿಪಾಗಿಟ್ಟಿರುವ ಈ ಮಹನೀಯರು ಈ ಆದಿತ್ಯ ಪುರಾಣದ ಮುಂದಿನ ಭಾಗಗಳನ್ನು ಪ್ರಕಟಿಸ ಬೇಕೆಂದು ಸಂಕಲ್ಪಿಸಿರುವುದರಿಂದ ಕನ್ನಡ ಸಾಹಿತ್ಯಾ ಭಿಮಾನಿಗಳೆಲ್ಲರೂ ಪ್ರೋತ್ಸಾಹ ನೀಡುವುದು ಅತ್ಯಗತ್ಯ.

—ಪಂಡಿತ ಹು. ಮ. ರಾಮಾರಾಧ್ಯ

**ಕನ್ನಡ ನ್ಯಾಯಶತಕಂ:**—ಪುಟ ೨೫, ಬೆಲೆ ೧೨ ಆಣೆಗಳು. ದೊರೆಯುವ ಸ್ಥಳ: ಶ್ರೀ ಜಗದ್ಗುರು ವಿಶ್ವಾರಾಧ್ಯ ಸೇವಾಶ್ರಮ, ಜೈಬಸಪ್ಪನ [illegible]ನಹಳ್ಳಿ ಪೋಸ್ಟ್, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ.

ಇದು ಶ್ರೀ ಜಡೆಯ ಶಿವಯೋಗೀಶ ಗ್ರಂಥ [illegible] ಹನ್ನೊಂದನೆಯ ಪುಷ್ಪ. ಶ್ರೀ ರಾಮೇಶ್ವರ [illegible] ಎಂಬ ಕವಿಯು ಶಿವಭಕ್ತಿ ಪ್ರಚುರವಾಗಿ ಸಂಸ್ಕೃತ ದಲ್ಲಿ ಬರೆದ [illegible] ಪರಾಮರ್ಶಿಸಿ, ಸ್ಫೂರ್ತಿ

ಗೊಂಡು ಈ ಕನ್ನಡ ನ್ಯಾಯಶತಕವನ್ನು ಶ್ರೀ ಜಗದ್ಗುರು ವಿಶ್ವಾರಾಧ್ಯ ಸೇವಾಶ್ರಮ ಸಂಸ್ಥಾಪಕರಾದ ಶ್ರೀ॥ ಷ॥ ಬ್ರ॥ ಬಾಲಬೃಹಸ್ಪತಿ ಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳವರು ರಚಿಸಿರುವರು. ಇದರಲ್ಲಿ ನೂರೊಂದು ಕಂದಪದ್ಯಗಳಿವೆ.

ನ್ಯಾಯಗಳು ಅಲ್ಪಾಕ್ಷರಗಳಿಂದ ಕೂಡಿ ವಿಶಾಲವಾದ ಅರ್ಥವನ್ನು ಕೊಡುತ್ತವೆ. ಎಲ್ಲಾ ಶಾಸ್ತ್ರಗಳಲ್ಲಿಯೂ ಇವು ಮನ್ನಣೆಯನ್ನು ಪಡೆದಿವೆ; ಅಧಿಕಾರವಾಣಿಯಿಂದ ತತ್ತ್ವವನ್ನು ಸಿದ್ಧಾಂತಗೊಳಿಸಲು ಸಹಕಾರಿಗಳಾಗಿವೆ. ಕನ್ನಡ ತೆಲುಗು ಮೊದಲಾದ ಭಾಷೆಗಳಲ್ಲಿ ಗಾದೆಗಳು ಹೇಗೋ, ಹಾಗೆ ಸಂಸ್ಕೃತ ವಾಙ್ಮಯದಲ್ಲಿ ನ್ಯಾಯಗಳು ವಿರಾಜಿಸುತ್ತಿವೆ

ಕೆಲವು ನ್ಯಾಯಗಳು ವ್ಯಾಕರಣ ಶಾಸ್ತ್ರದಲ್ಲಿಯೂ ಕೆಲವು ತರ್ಕಶಾಸ್ತ್ರದಲ್ಲಿಯೂ ಮತ್ತೆ ಕೆಲವು ವೇದಾಂತದಲ್ಲಿಯೂ ಉಪಯೋಗಿಸಲ್ಪಟ್ಟಿವೆ. ಹೀಗೆ ಬೇರೆ ಬೇರೆ ನ್ಯಾಯಗಳು ಮೀಮಾಂಸಾ, ಸಾಂಖ್ಯ ಯೋಗ, ಅಲಂಕಾರ ಮೊದಲಾದ ಬೇರೆ ಬೇರೆ ಶಾಸ್ತ್ರಗಳಲ್ಲಿ ಬಳಸಲಟ್ಟಿವೆ. ಆದರೂ ಅನೇಕ ನ್ಯಾಯಗಳು ಸಾರ್ವತ್ರಿಕ ವ್ಯಾಪ್ತಿಯನ್ನೊಳಗೊಂಡಿವೆ. ಅನೇಕ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಅನೇಕ ನ್ಯಾಯಗಳು 'ನ್ಯಾಯಾಂಜಲಿ,' 'ನ್ಯಾಯಸಂಗ್ರಹ'ಗಳೆಂಬ ಗ್ರಂಥಗಳಲ್ಲಿ ಪ್ರಕಟವಾಗಿವೆ.

"ಬೋಧಕರಿಗೆ ಲೇಖಕರಿಗೆ ಇವುಗಳ ಉಪಯೋಗವು ಶತಾಧಿಕವಾಗಿದೆ. ಕಾಲಕಾಲಕ್ಕೆ ಜನತೆಯ ಜ್ಞಾನಾನುಭವಗಳು ಬೆಳೆಬೆಳೆದಂತೆ ಇವು ಬಲ್ಲವರ ಬಾಯಿಂದ ಸಹಜ ಹೊರಹೊಮ್ಮಿರುವುವು. ಹೀಗೆ ಎಲ್ಲಾ ಬಗೆಯಿಂದ ಗಮನಾರ್ಹವಾದ ನ್ಯಾಯಗಳು ಹಿಂದಿನವರ ಅನುಭವಗಳನ್ನು ಇಂದಿನವರೆಗೆ ಬೋಧಿಸುವ ಗುರೂಪದೇಶಗಳಂತಿರುವುವು" ಎಂಬ ಶ್ರೀ ಸ್ವಾಮಿಗಳವರ ನಿವೇದನೆಯು ಸಮಂಜಸವಾಗಿದೆ.

ಸೂಚೀಕಟಾಹನ್ಯಾಯ ಮೊದಲ್ಗೊಂಡು ತೊಂಬತ್ತೊಂಬತ್ತು ನ್ಯಾಯಗಳನ್ನು ಈ ಶತಕದಲ್ಲಿ ಅಳವಡಿಸಲಾಗಿದೆ. ಒಂದೊಂದು ನ್ಯಾಯವನ್ನು ಒಂದೊಂದು ಪದ್ಯದಲ್ಲಿ ಉಲ್ಲೇಖಿಸಿ, ಪರಶಿವನಲ್ಲಿ ಆತ್ಮನಿವೇದನೆ ಮಾಡುತ್ತಾ ಸಮನ್ವಯಗೊಳಿಸಿದೆ. ಕವಿಶೈಲಿಯು ಸೊಗಸಾಗಿ ತಡೆಯಿಲ್ಲದೆ ಸಾಗಿದೆ. ಭಾಷೆಯು ಲಲಿತವಾಗಿದೆ. ಕಾವ್ಯವು ಭಾವಪೂರ್ಣವಾಗಿದೆ. ಜೀವಪರಮಾತ್ಮಾನುಸಂಧಾನದ ಬಗೆಯು ಉಜ್ಜ್ವಲವಾಗಿದೆ. ಇದನ್ನು ಓದುತ್ತಿದ್ದರೆ ಭಕ್ತನು ಎದುರಿನಲ್ಲಿ ಮಾತನಾಡುತ್ತಿರುವಂತೆ ಭಾಸವಾಗುವುದು.

ಒಲೆಯ ಮೇಲೆ ಅಕ್ಕಿಯು ಕುದಿಯುತ್ತಿರುವಾಗ ಪಾತ್ರೆಯಲ್ಲಿ ಬೆಂದ ಒಂದಗುಳನ್ನು ಪರೀಕ್ಷಿಸಿ ಅನ್ನವಾಗಿದೆಯೆಂದು ಭಾವಿಸುವುದು 'ಸ್ಥಾಲೀಪುಲಾಕನ್ಯಾಯ.' ಇದನ್ನು "ದುರಿತಾಕುಲನಾದೆನ್ನಯ । ಪರಭಕ್ತಿಯನೊಂದೆ ನೋಡಿ ಪರಿಕಿಸಿ ಸಲಹು ॥ ಕರಿಗೊರಳನೆ, ತ್ರಿಪುರಹರನೆ । ಪರಮನೆ, ಸ್ಥಾಲೀಪುಲಾಕನ್ಯಾಯವನೊಲಿದು ॥" ಎಂಬ ಪದ್ಯದಲ್ಲಿ ಸಮನ್ವಯಗೊಳಿಸಿರುವುದು ಹೃದಯಂಗಮವಾಗಿದೆ, ಹೀಗೆಯೇ ಗುಡಜಿಹ್ವಿಕಾನ್ಯಾಯ, ದೇಹಳಿದೀಪನ್ಯಾಯ, ಕವಾಟಬಂಧನನ್ಯಾಯ, ಶ್ವಪುಚ್ಛನ್ಯಾಯ, ಸೂಚೀತಂತುನ್ಯಾಯ, ಕಾಣಾಂಜನ ನ್ಯಾಯ, ಜಲಚಂದ್ರನ್ಯಾಯ, ವಿಷಸಂಪೃಕ್ತಮಧುನ್ಯಾಯ ಇವುಗಳ ಸಮನ್ವಯವು ಅತ್ಯುತ್ತಮವಾಗಿದೆ.

ಈ ಗ್ರಂಥದಲ್ಲಿ ಉಪಯೋಗಿಸಿದ ನ್ಯಾಯಗಳ ಅರ್ಥವಿವರಣೆಯನ್ನು ಟಿಪ್ಪಣಿ ರೂಪದಲ್ಲಿ ಬರೆದು ಪ್ರಕಟಿಸುವುದಾದರೆ, ಸಂಸ್ಕೃತ ಭಾಷೆಯ ಪರಿಚಯವಿಲ್ಲದ ಕನ್ನಡಿಗರಿಗೆ ಹೆಚ್ಚು ಪ್ರಯೋಜನವಾಗುವುದರಲ್ಲಿ ಸಂದೇಹವಿಲ್ಲ. ಕೆಲವೆಡೆಯಲ್ಲಿರುವ ದೂರಾನ್ವಯದೋಷ, ಮುದ್ರಣ ದೋಷಗಳನ್ನು ಕೂಡ ಹೋಗಲಾಡಿಸಬೇಕಾಗಿದೆ. ಒಟ್ಟಿನಲ್ಲಿ ಇದು ಕನ್ನಡ ಸಾಹಿತ್ಯಕ್ಕೆ ಹೊಸ ಮಾದರಿಯ ಕಾಣಿಕೆ. ಜೀವಂತವಾಗಿ ಉಳಿಯುವ, ಉಜ್ವಲವಾಗಿ ಬೆಳಗುವ ಕೃತಿಯಿದೆಂದು ಭಾವಿಸುತ್ತೇನೆ.

ಆತ್ಮೋನ್ನತಿಗೆ ಸಾಧಕವಾದ ಇಂತಹ ಗ್ರಂಥಗಳನ್ನು ಕನ್ನಡಿಗರು ಕೊಂಡು ಪ್ರೋತ್ಸಾಹಿಸುವುದೊಳ್ಳೆಯದು. ಆದರೆ ೨೫ ಪುಟಗಳುಳ್ಳ ಈ ಪುಸ್ತಕಕ್ಕೆ ೧೨ ಆಣೆಗಳ ಬೆಲೆಯಿಟ್ಟಿರುವುಧು ಪ್ರಚಾರ ದೃಷ್ಟಿಯಿಂದ ಸೂಕ್ತವೆ?

**ಮಿಶ್ರಸ್ತೋತ್ರದ ವಚನ:** ಸಂಪಾದಕರು ಮತ್ತು ಪ್ರಕಾಶಕರು: ಶ್ರೀ ಪ್ರಭುಸ್ವಾಮಿಗಳು. ಪುಟ: ೭೨. ಬೆಲೆ: ರೂ. ೦-೧೨-೦ ದೊರೆಯುವ ಸ್ಥಳ: ಹೊಸಹಳ್ಳಿಯ ಸಂಸ್ಥಾನ ಮಠ, ಗದಗ್ ತಾಲ್ಲೂಕ್, ಧಾರವಾಡ ಜಿಲ್ಲ.

ಇದರಲ್ಲಿ ೧೧ನೆಯ ಶತಮಾನಕ್ಕೆ ಸೇರಿದ ಜೇಡರ ದಾಸಿಮಯ್ಯ, ೧೫ನೆಯ ಶತಮಾನಕ್ಕೆ ಸೇರಿದ ತೋಂಟದ ಸಿದ್ಧಲಿಂಗಯತಿಗಳು ಮತ್ತು ೧೨ನೆಯ ಶತಮಾನಕ್ಕೆ ಸೇರಿದ ಪ್ರಭುದೇವರು ಮೊದಲಾದ ೩೫

ಜನ ಶಿವಶರಣರು ಒಬ್ಬರ ಮಹಿಮೆಯನ್ನೊಬ್ಬರು ಹೊಗಳಿದ ಸುಂದರವಾದ ೧೦೮ ವಚನಗಳಿವೆ.

ಷಟ್‌ಸ್ಥಲ ಚಕ್ರವರ್ತಿ ಸಂಪಾದನೆಯ ಶ್ರೀ ಚನ್ನಂಜೆದೇವರು ಈ ವಚನರತ್ನಗಳನ್ನು ಸಂಗ್ರಹಿಸಿ, ಪೋಣಿಸಿರುವರು. ಇವರು ತೋಂಟದ ಸಿದ್ಧಲಿಂಗ ಯತಿಯ ಶಿಷ್ಯಪರಂಪರೆಗೆ ಸೇರಿದವರೆಂದೂ, ತತ್ತ್ವಜ್ಞಾನಿಗಳೂ, ತಪಸ್ವಿಗಳೂ, ವಿರಕ್ತರೂ ಆಗಿದ್ದರೆಂದೂ ತಿಳಿಯಬರುತ್ತದೆ. ಇವರಿಗೆ ಚನ್ನನಂಜಾರ್ಯ, ಚೆನ್ನಾಚಾರ್ಯ, ಆಚಾರ್ಯವರದ ಹರಿತಾಳ ನಂಜೇಶ—ಎಂಬ ಹೆಸರುಗಳೂ ಇದ್ದಂತೆ ಉಲ್ಲೇಖವಿದೆ. ಇವರು ೧೫೩೦ರ ಸುಮಾರಿನಲ್ಲಿದ್ದರೆಂದು ಸಂಶೋಧಕರು ನಿರ್ಧರಿಸಿರುವರು.

ನಿವೃತ್ತಿ ಮಾರ್ಗವನ್ನುಪದೇಶಿಸುವ ವೇದಾಂತ ತತ್ತ್ವವನ್ನೊಳಗೊಂಡ ಶಿವಶರಣರ ವಚನಗಳನ್ನು ಕನ್ನಡ ಉಪನಿಷತ್ತುಗಳೆಂದು ವಿಮರ್ಶಕರು ಕರೆದಿರುವರು. ಉದಾತ್ತಭಾವನೆಯಿಂದ ಕೂಡಿದ ವಚನ ವಾಙ್ಮಯವು ಕನ್ನಡ ಸಾಹಿತ್ಯದಲ್ಲಿ ಉನ್ನತಸ್ಥಾನವನ್ನುಗಳಿಸಿದೆ.

ತೋಂಟದ ಸಿದ್ಧಲಿಂಗಯತಿಗಳ ಶಿಷ್ಯಪರಂಪರೆಯು ವಚನ ವಾಙ್ಮಯವನ್ನು ಸಂಗ್ರಹಿಸಿ ಕಾಪಾಡಿದ ಮಹತ್ಕಾರ್ಯವನ್ನು ಯಾರೂ ಮರೆಯುವಂತಿಲ್ಲ. ಈ ಮಹತ್ಕಾರ್ಯದಲ್ಲಿ ಶ್ರೀ ಚನ್ನಂಜೆದೇವರ ಪರಿಶ್ರಮವು ಕೂಡ ಗಮನಾರ್ಹವಾಗಿದೆ.

ಮಿಶ್ರಸ್ತೋತ್ರವಚನವು ೧೬ನೆಯ ಶತಮಾನಕ್ಕೆ ಸೇರಿದ ಪ್ರಾಚೀನ ಗ್ರಂಥವಾದರೂ, ಈಗತಾನೆ ಪ್ರಕಟವಾಗಿರುವುದು ಜನತೆಯ ದುರದೃಷ್ಟವೆನ್ನಬೇಕಾಗಿದೆ. ರಾವ್‌ಬಹಾದ್ದೂರ್ ಶ್ರೀ ಫ. ಗು. ಹಳಕಟ್ಟಿಯವರೇ ಮೊದಲಾದವರು ಈ ಮೊದಲೇ ಪ್ರಕಟಿಸಿದ ವಚನ ಗ್ರಂಥಗಳನ್ನು ಅವಲೋಕಿಸಿದವರಿಗೆ ಈ ಕೃತಿಯಲ್ಲಿನ ವಿಷಯಗಳು ಹೊಸವಲ್ಲವಾದರೂ, ಮಹಾನುಭಾವರ ಮಹಿಮೆ ಹಾಗು ಹಿರಿಮೆಯನ್ನು ಹೊಗಳಿದ ಸುಂದರ ವಚನಗಳನ್ನು ಒಂದೆಡೆ ಕಾಣಬೇಕಾದರೆ ಈ ಪುಸ್ತಕವನ್ನು ಸಂಗ್ರಹಿಸುವುದಗತ್ಯ. ಇಂತಹ ಪ್ರಾಚೀನ ಪುಸ್ತಕವನ್ನು ಸಂಪಾದಿಸಿ, ವಿಚಾರ ಪರಿಪ್ಲುತವಾದ ಮುನ್ನುಡಿಯನ್ನು ಬರೆದು ಪ್ರಕಾಶಗೊಳಿಸಿದ ಶ್ರೀ ಪ್ರಭುಸ್ವಾಮಿಗಳವರು ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿರುವರು. ಪುಸ್ತಕದ ಆಕಾರ ಮತ್ತು ಮುದ್ರಣ ಅಂದವಾಗಿದೆ.

—ಟೀಕಾ. ವೆಂಕಟಾಚಲಗುಪ್ತ

ಸುಖವಿಪ್ಲವ (ಕಾದಂಬರಿ) ಲೇಖಕರು: ಶ್ರೀ ರಾ.ಸು. ಮಣಿ. ಪ್ರಕಾಶಕರು: ಉಷಾ ಸಾಹಿತ್ಯಮಾಲೆ, ಮೈಸೂರು. ಕ್ರೌನ್ ಅ. ಪು. ೧೩೪; ಬೆಲೆ ೧-೮-೦.

ಕೃಷ್ಣಾಪುರದ ಜಮೀನ್ದಾರ ವೈದ್ಯನಾಥ ಕೇವಲ ಜಮೀನ್ದಾರನಷ್ಟೇ ಅಲ್ಲ. ವಿದ್ಯಾವಂತನೂ ಹೌದು. 'ಸಾಹಿತ್ಯ ವಿಶಾರದ' ಬೇರೆ. ಮೈಸೂರಿನ ಕಾಲೇಜಿನಲ್ಲಿ ಉಪಾಧ್ಯಾಯ. ವೇದವತಿ ಈತನ ವೃದ್ಧತಾಯಿ. ವಿಧವೆ, ವೈದ್ಯನಾಥನ ದುರದೃಷ್ಟ-ಅವನ ಅಚ್ಚುಮೆಚ್ಚಿನ ಮಡದಿ ವಾಸಂತಿ ಅನೀಮಿಯಾ ಕಾಯಿಲೆಯಿಂದ ನರಳಿ ಅಕಾಲ ಮರಣಕ್ಕೆ ಈಡಾಗುವಳು. ಪ್ರಿಯ ಮಡದಿಯ ವಿಯೋಗದಿಂದ ವೈದ್ಯನಾಥನ ಬಾಳು ನೈರಾಶ್ಯಮಯವಾಯಿತು. ವಾಸಂತಿ ತನ್ನ ಕುರುಹಾಗಿ ಜಾನಕಿ, ರಂಗಮಣಿ, ಎಂಬ ಇಬ್ಬರು ಹೆಣ್ಣುಮಕ್ಕಳನ್ನು ಬಿಟ್ಟು ಹೋಗಿದ್ದಳು. ಅವರಿಬ್ಬರೂ ವಿವಾಹವಾಗಿ ತಮ್ಮ ತಮ್ಮ ಪತಿಗೃಹಗಳಲ್ಲಿ ಸುಖವಾಗಿ ಸಂಸಾರ ನಡೆಸುತ್ತಿದ್ದರು. ವಿಧುರನಾದ ವೈದ್ಯನಾಥನಿಗೆ ಜೀವನದಲ್ಲಿ ನೆಮ್ಮದಿಯಿರಲಿಲ್ಲ. ವಾಸಂತಿಯ ಅಕಾಲ ಮರಣದಿಂದ ಅವನ ದಾಂಪತ್ಯಜೀವನದ ಹಸಿವು ಸಂಪೂರ್ಣವಾಗಿ ಹಿಂಗಿರಲಿಲ್ಲ. ಎಂತಲೇ ದ್ವಿತೀಯ ವಿವಾಹದ ಸನ್ನಾಹದಲ್ಲಿ ತೊಡಗುವನು. ಮಗನ ಈ ಗುಪ್ತಬಯಕೆಗೆ ಪುಟಗೊಟ್ಟು ಅವನ ಪುನರ್ವಿವಾಹಕ್ಕೆ ಒತ್ತಾಸೆಯನ್ನೀಯುವಳು ತಾಯಿ ವೇದವತಿ. ತಂದೆಯ ಈ ದ್ವಿತೀಯ ವಿವಾಹ ಜಾನಕಿ ರಂಗಮಣಿಯರಲ್ಲಿ ಅಸಮಾಧಾನದ ಕಿಚ್ಚನ್ನು ಹೊತ್ತಿಸಿದುದು ಮಾತ್ರವಲ್ಲದೆ ತಂದೆಯ ಬಗ್ಗೆ ಅವರಲ್ಲಿ ತಿರಸ್ಕಾರವನ್ನು ಹುಟ್ಟಿಸಿತು. ಇದೇ ಕಾರಣದಿಂದ ತಂದೆ ಮಕ್ಕಳು ದೂರವಾಗುತ್ತಾಬಂದರು. ಹಳ್ಳಿಯ ಮುಗ್ಧ ಕನ್ಯೆ ಪುಷ್ಪ ವೈದ್ಯನಾಥನ ಮಡದಿಯಾದಳು. ವೈದ್ಯನಾಥ ವಿದ್ಯಾವಂತ, ರಸಿಕ. ಪುಷ್ಪ ತನಗೆ ತಕ್ಕ ಮಡದಿಯಾಗಬೇಕೆಂಬ ಉತ್ಕಟೇಚ್ಛೆಯಿಂದ ನಿರಕ್ಷರಕುಕ್ಷಿಯಾದ ಪುಷ್ಪಳ ಸುಧಾರಣೆಗೆ ತೊಡಗಿದ. ಹಲವಾರು ತಿಂಗಳಲ್ಲೇ ಅವಳನ್ನು ಅವಳೇ ಗಂಡನ ಹತ್ತಿರ ಹೇಳಿಕೊಳ್ಳುವಂತೆ "ನಾನು ಈ ಪ್ರಪಂಚದ ಕಾಡಿನ ಒಂದು ಶುಷ್ಕಲತೆಯಲ್ಲಿ ಹುಟ್ಟಿ, ಕರಕು ಉದುರಿಹೋಗುತ್ತಿದ್ದ ಒಂದು ಹುವ್ವು ನನ್ನ ಭಾಗಕ್ಕೆ ನೀವು ದೇವರ ಹಾಗೆ ಬಂದು, ನನ್ನ ಪ್ರೇಮದ ಅಂಜಲಿಯನ್ನು ಸ್ವೀಕರಿಸಿ, ಅಮೃತ ಹಾಕಿ, ಅದನ್ನು ಪ್ರಫುಲ್ಲ ಮಾಡಿದಿರಿ. ಎಲ್ಲ ಸ್ವರ್ಣರೇಖೆಗಳಿಂದಲೂ ಶೃಂಗರಿಸಿದಿರಿ. ಅತ್ಯುತ್ತಮ

ಸ್ತ್ರೀಯನ್ನಾಗಿ ಮಾಡಿದಿರಿ." ಸುಸಂಸ್ಕೃತ ಸ್ತ್ರೀಯನ್ನಾಗಿ ಪರಿವರ್ತಿಸಿದ ವಿದ್ಯಾವಂತಳನ್ನಾಗಿ ಮಾಡಿದ. ಕಲಾ ವಿದೆಯನ್ನಾಗಿಸಿದ. ಪುಷ್ಪಳ ಜೀವನದಲ್ಲಿ ಸಂತೋಷ ಸಂತೃಪ್ತಿಗಳು ತಾಂಡವಾಡತೊಡಗಿದವು. ಆದರೆ ಜೀವನದ ಹಾದಿ ಕೇವಲ ಮಲ್ಲಿಗೆಯ ಹಾಸಿಗೆಯಲ್ಲವಲ್ಲ. ಪುಷ್ಪ ಗರ್ಭವತಿಯಾದಳು. ವಂಶೋದ್ಧಾರಕನಾದ ಪುತ್ರನನ್ನು ಪ್ರಸವಿಸಿದಳು. ಪುತ್ರಸಂತಾನದ ವಾರ್ತೆಯನ್ನು ಕೇಳಿ ಉಂಟಾದ ಆನಂದಾತಿರೇಕವನ್ನು ಭರಿಸಲಾರದೆ ಉದ್ವೇಗದಿಂದ ಎದೆಯೊಡೆದು ರಕ್ತ ಕಾರುತ್ತಾ ಪ್ರಾಣ ನೀಗಿದ ವೈದ್ಯನಾಥ. ಅನಿರೀಕ್ಷಿತವಾದ ಪತಿಯ ಮರಣದ ದಾರುಣ ದುಃಖವನ್ನು ತಡೆಯಲಾರದೆ ಪುಷ್ಪಳಿಗೂ ಚಿತ್ತವಿಕಾರವುಂಟಾಗಿ ಒಂದು ದಿನ ಎದೆಯೊಡೆದು ತನ್ನ ಬಾಳನ್ನು ಕೊನೆಗಾಣಿಸುವಳು. ಇದಿಷ್ಟು ಕಾದಂಬರಿಯ ಕಥಾವಸ್ತು.

ಕಾದಂಬರಿಯ ಕಥಾವಸ್ತುವಿನಲ್ಲಿ ಮೊದಲಿಂದ ಕೊನೆಯವರೆಗೂ ಕೃತಕತೆ ಎದ್ದು ಕಾಣುತ್ತದೆ. ಕತೆಯಲ್ಲಿನ ಘಟನೆಗಳಾಗಲೀ ಸನ್ನಿವೇಶಗಳಾಗಲೀ ಸಹಜವಾಗಿ ಚಿತ್ರಿಸಲ್ಪಟ್ಟಿಲ್ಲ. ಮಗ ಹುಟ್ಟಿದ ಸಂತೋಷ ವಾರ್ತೆಯನ್ನು ಕೇಳಿ ತಂದೆಯಾದವನು ಎದೆಯೊಡೆದು ಸಾಯುವ ಸನ್ನಿವೇಶವಂತೂ ಕೇವಲ ನಾಟಕೀಯವಾಗಿದೆ. ಲೇಖಕರ ಶೈಲಿ ತಡೆತಡೆದು ಸಾಗುತ್ತದೆ. ಕಾದಂಬರಿಗೆ ಬೇಕಾದ ಹರಿತವಾದ ಹಾಗೂ ನಿರರ್ಗಳವಾಗಿ ಹರಿಯತಕ್ಕ ಸರಳ ಶೈಲಿ ಈ ಲೇಖಕರಿಗೆ ಇನ್ನೂ ಕರಗತವಾಗಿಲ್ಲ. ಅವರು ಬಳಸಿರುವುದು ಗ್ರಂಥಸ್ಥವಾದ ಭಾಷೆ. ಕತೆಯನ್ನೋದುತ್ತಿರುವಾಗ ಇದು ಯಾವುದಾದರೂ ಬಂಗಾಳೀ ಅಥವಾ ಹಿಂದೀ ಕಾದಂಬರಿಯ ಭಾಷಾಂತರವೇನೋ ಎನ್ನುವ ಭ್ರಾಂತಿಯುಂಟಾಗುತ್ತದೆ. ಲೇಖಕರ ಭಾಷೆ ಶೈಲಿಗಳಲ್ಲಿ ಇನ್ನೂ ಹೆಚ್ಚಿನ ಸುಧಾರಣೆ ಅವಶ್ಯಕವಿರುತ್ತದೆ. ವೈದ್ಯನಾಥನ ವ್ಯಕ್ತಿತ್ವವಾಗಲೀ ಪುಷ್ಪಳ ವ್ಯಕ್ತಿತ್ವವಾಗಲೀ ಸಾಕಷ್ಟು ಪರಿಣಾಮಕಾರಿಯಾಗಿ ಚಿತ್ರಿತವಾಗಿಲ್ಲ. ಕಾದಂಬರಿಯಲ್ಲಿನ ಯಾವ ಪಾತ್ರವೂ ಓದುಗರ ಮನಸ್ಸಿನಲ್ಲಿ ಚಿರಕಾಲ ನಿಲ್ಲುವ ಹಾಗೆ ಸತ್ವಪೂರ್ಣವಾಗಿ ಕಡೆಯಲ್ಪಟ್ಟಿಲ್ಲ. ಈ ಲೇಖಕರು ಕಥನ ಕಲೆಯಲ್ಲಿ ಇನ್ನೂ ಹೆಚ್ಚಿನ ಪರಿಶ್ರಮವನ್ನು ಪಡೆದುಕೊಂಡು ಉತ್ತಮ ಕೃತಿಗಳನ್ನು ನೀಡಲೆಂದು ಹಾರೈಸುತ್ತೇವೆ.

**ಹತೀಮ್ ತಾಯ್** (ಉಜ್ವಲ ತ್ಯಾಗ) ಏಕಾಂಕ ನಾಟಕ :— ಲೇಖಕರು : ಶ್ರೀ ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ.ಎ. ಪ್ರಕಾಶಕರು: ನವಚೇತನ ಪ್ರಕಟನಾಲಯ, ಬಸವನಗುಡಿ, ಬೆಂಗಳೂರು ೪. ಫೂಲ್‌ಸ್ಕೇಪ್ ಅಷ್ಟ[illegible] ಪುಟಗಳು. ಬೆಲೆ ೦-೪-೬.

ಇದೊಂದು ಪುಟ್ಟ ಏಕಾಂಕ ನಾಟಕ. ಈಗಾಗಲೇ 'ಲೋಭಿ' 'ವಿಧಿ' 'ಗ್ರಹಚಾರ' 'ವ್ಯಾಮೋಹ' ಮುಂತಾದ ಸಾಮಾಜಿಕ ನಾಟಕಗಳನ್ನು ರಚಿಸಿರುವ ಶ್ರೀ ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್ಯರು ಇದರ ಲೇಖಕರು. ದಕ್ಷಿಣ ಅರೇಬಿಯದಲ್ಲಿ ಏಮಾನ್ ಎಂಬ ಒಂದು ರಾಜ್ಯ. ಆ ರಾಜ್ಯದಲ್ಲಿ 'ತಾಯ್' ಎಂಬ ಒಂದು ಪಂಗಡದ ಅಧಿಪತಿ ಹತೀಮ್. ಅತಿಥಿ ಸತ್ಕಾರಕ್ಕೂ, ದಾನಧರ್ಮಗಳಿಗೂ ಹೆಸರಾದ ವ್ಯಕ್ತಿ ಹತೀಮ್ ತನ್ನ ಪ್ರಚಂಡ ಬಲದಾನಗಳಿಗೆ ಇಡೀ ಅರೇಬಿಯದಲ್ಲೆಲ್ಲಾ ಪ್ರಖ್ಯಾತಿ ಪಡೆದಿದ್ದ. ರೂಮ್ ದೇಶದ ಸುಲ್ತಾನನಿಗೆ ಹತೀಮನ ಔದಾರ್ಯವನ್ನು ಪರೀಕ್ಷಿಸಬೇಕೆಂಬ ಬಯಕೆಯಾಯಿತು. ಹತೀಮನ ಸತ್ವಪರೀಕ್ಷೆ ಮಾಡುವ ಉದ್ದೇಶದಿಂದ ಅವನು ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ಅವನ ದಿವ್ಯಾಶ್ವವನ್ನು ತನಗೆ ಕೊಟ್ಟುಬಿಡಬೇಕೆಂದು ತನ್ನ ರಾಯಭಾರಿಯ ಮೂಲಕ ಹತೀಮನಿಗೆ ಹೇಳಿಕಳುಹಿಸುವನು. ಹತೀಮ್ ಅತಿಥಿ ಸತ್ಕಾರಕ್ಕಾಗಿ ತನ್ನ ಪ್ರೀತಿಯ ಕುದುರೆಯನ್ನೇ ಕೊಂದು ಅದರ ಮಾಂಸದಿಂದ ರಾಯಭಾರಿಗೂ ಆತನ ಪರಿವಾರದವರಿಗೂ ಅತಿಥಿಸತ್ಕಾರ ಮಾಡಿ ಅವರನ್ನು ಸಂತೃಪ್ತಿಗೊಳಿಸುವನು. ನಡೆದ ಕತೆಯೆಲ್ಲವನ್ನೂ ಹತೀಮನೇ ರಾಯಭಾರಿಗೆ ತಿಳಿಸುವನು. ರಾಯಭಾರಿ ಹತೀಮನನ್ನು ಅವನ ಉಜ್ವಲ ತ್ಯಾಗಕ್ಕಾಗಿ ಬಾಯಿತುಂಬ ಹೊಗಳಿ ತನ್ನ ರಾಜಧಾನಿಗೆ ಹಿಂದಿರುಗುವನು. ಇದಿಷ್ಟು ಈ ಏಕಾಂಕ ನಾಟಕದ ಕತೆ.

ಈ ನಾಟಕ ಶಾಲಾ ಬಾಲಕರ ಅಭಿನಯಕ್ಕಾಗಿ ರಚಿಸಲ್ಪಟ್ಟಿದೆಯೆಂದು ಲೇಖಕರೇ ಹೇಳಿದ್ದಾರೆ. ನಾಟಕ ಸರಳವಾಗಿಯೂ, ಬೋಧಪ್ರದವಾಗಿಯೂ ರಚಿಸಲ್ಪಟ್ಟಿದೆ. ಆದರೆ ಸ್ವಗತ ಭಾಷಣಗಳು ಬಾಲಕರ ಮಟ್ಟಕ್ಕೆ ಮೀರಿ ಉಹಳ ಉದ್ದವಾಗಿವೆ. ಅವು ಆದಷ್ಟು ಚಿಕ್ಕದಾಗಿರಬೇಕು. ಬಾಲಕರು ಬಾಯಿಪಾಠ ಮಾಡಲು ಸುಲಭವಾಗಿರಬೇಕು. ಲೇಖಕರು ತಮ್ಮ ಮುಂದಿನ ನಾಟಕಗಳಲ್ಲಿ ಈ ಅಂಶದ ಕಡೆಗೆ ಹೆಚ್ಚು ಗಮನವೀಯಬೇಕೆಂದು ಕೋರುತ್ತೇವೆ. ಅವರು ಇದೇ ರೀತಿ ನೀತಿಬೋಧಕವಾಗಿರತಕ್ಕ ಸಣ್ಣ ಸಣ್ಣ ಏಕಾಂಕ ನಾಟಕಗಳನ್ನು ಪ್ರಕಟಿಸಿ, ಬಾಲಸಾಹಿತ್ಯದ ಸಂಪತ್ತನ್ನು ಹೆಚ್ಚಿಸಲೆಂದು ಹಾರೈಸುತ್ತೇವೆ.

—ತ್ರಿವಿಕ್ರಮ

## ಅಮೇರಿಕದ ಇನ್ನೂ ಕೆಲವು ಪುಸ್ತಕಗಳು

ನೀಗ್ರೋ (ಅಮೇರಿಕದ ಜೀವನದಲ್ಲಿ):–ಪ್ರಕಾಶಕರು: ಹಿಗ್ಗಿನ್ ಬಾಥಮ್ಸ್, ಲಿಮಿಟೆಡ್, ಬೆಂಗಳೂರು. ಯುನೈಟೆಡ್ ಸ್ಟೇಟ್ಸ್ ಇನ್ಫರ್ಮೇಷನ್ ಸರ್ವಿಸ್ಸಿನವರು ಹಂಚುತ್ತಿರುವ ಪುಸ್ತಕ. ಪುಟ ೨೪.

ಅಮೆರಿಕನ್ ಜನಜೀವನದಲ್ಲಿ ನೀಗ್ರೋಗಳು ಈಚೆಗೆ ಹೇಗೆ ಹೊಂದಿಕೊಳ್ಳುತ್ತಿದ್ದಾರೆ ಮತ್ತು ಅವರ ಪುರೋಭಿವೃದ್ಧಿ ಹೇಗೆ ಆಗುತ್ತಿದೆ ಎಂಬುದನ್ನು ಈ ಸಣ್ಣ ಪುಸ್ತಕದಲ್ಲಿ ಹೇಳಿದೆ. 'ಈ ಶತಮಾನದ ಮೊದಲಲ್ಲಿ ನೀಗ್ರೋ ಅಕ್ಷರಸ್ಥರ ಸಂಖ್ಯೆ ಶೇಕಡ ೫೬ ಇತ್ತು. ೧೯೪೦ನೇ ಜನಗಣತಿಯ ಪ್ರಕಾರ ಅವರ ಅಕ್ಷರಸ್ಥರ ಸಂಖ್ಯೆ ಶೇಕಡ ೯೦ಕ್ಕೆ ಏರಿತು' '೧೯೨೦ರಲ್ಲಿ ಹೈಸ್ಕೂಲು ವಿದ್ಯಾಭ್ಯಾಸ ಮಾಡುತ್ತಿದ್ದವರ ಸಂಖ್ಯೆಗಿಂತ ಹೆಚ್ಚು ಜನ ೧೯೪೮ರಲ್ಲಿ ಕಾಲೇಜು ವಿದ್ಯಾಭ್ಯಾಸ ಮಾಡುತ್ತಿದ್ದಾರೆ' ಎಂಬ ಅಂಕಿ ಅಂಶಗಳನ್ನು ನೋಡುವಾಗ ಪ್ರಗತಿಯ ಚಿತ್ರ ಓದುಗರನ್ನು ಅಚ್ಚರಿಗೊಳಿಸಿ ಸಲ್ಲದ ಅಭಿಪ್ರಾಯಗಳಿದ್ದರೆ ಅವನ್ನು ಹೋಗಲಾಡಿಸದೆ ಇರಲಾರವು.

ವಿಶ್ವಸಂಸ್ಥೆಯ ಕಾರ್ಯವಿಧಾನ—ಪ್ರಕಾಶಕರು: ಹಿಗ್ಗಿನ್ ಬಾಥಮ್ಸ್, ಲಿಮಿಟೆಡ್. ಮೂಲಲೇಖಕರು, ಟಾಮ್ ಗಾಲಟಿ. ಪುಟ ೨೫೮.

ವಿಶ್ವಸಂಸ್ಥೆಯ ರಚನೆ ಏನು, ಅದರ ಬೇರೆಬೇರೆ ಸಮಿತಿಗಳು ಯಾವಯಾವ ಕಾರ್ಯಗಳನ್ನು ಕೈಗೊಂಡು ಹೇಗೆ ನಡೆಸುತ್ತವೆ ಎಂಬುದನ್ನು ಪುಸ್ತಕ ಬಹಳ ಸ್ವಾರಸ್ಯವಾಗಿ ತಿಳಿಸಿಕೊಡುತ್ತದೆ. ಅಂತರರಾಷ್ಟ್ರೀಯ ಒಡಂಬಡಿಕೆಗಳು; ವಿಶ್ವಸಂಸ್ಥೆಯ ಸನ್ನದು; ಸನ್ನದಿನ ಉದ್ದೇಶಗಳಿಗೆ ಒಳಪಟ್ಟ ಯಾವ ಪ್ರಶ್ನೆಯನ್ನಾದರೂ ಚರ್ಚಿಸಿ ಭದ್ರತಾ ಸಮಿತಿಗೆ ಸಲಹೆಗಳನ್ನು ಕಳಿಸುವ ಮಹಾಸಭೆ; ಆಡಳಿತ ಸಿಬ್ಬಂದಿಗಳನ್ನು ಒಳಗೊಂಡು ಮಹಾಸಭೆಗೆ ಮತ್ತು ಭದ್ರತಾ ಸಮಿತಿಗೆ ವರದಿಗಳನ್ನೊಪ್ಪಿಸುವ ಸೆಕ್ರೆಟೇರಿಯಟ್; ಅಂತರರಾಷ್ಟ್ರೀಯ ಮನಸ್ತಾಪಗಳನ್ನು ವಿಚಾರಣೆ ಮಾಡಿ, ಅವಶ್ಯಕವಾದರೆ ಆಕ್ರಮಣಕಾರರಮೇಲೆ ಕಾರ್ಯಕ್ರಮವನ್ನು ತೆಗೆದುಕೊಂಡು ಶಾಂತಿಪಾಲನೆ ಮಾಡುವ ಭದ್ರತಾಸಮಿತಿ; ಮತ್ತು ಇದಕ್ಕೆ ಸಹಾಯವಾದ ಅಣುಶಕ್ತಿಯ ಸಮಸ್ಯೆಗಳನ್ನು ಪರಿಶೀಲಿಸುವ ಅಣುಶಕ್ತಿನಿಯೋಗ; ಆಕ್ರಮಣ ರಾಷ್ಟ್ರದಮೇಲೆ ಸೈನ್ಯವನ್ನು ನಡೆಸುವ ಮಿಲಿಟರಿ ಸ್ಟಾಫ್ ಕಮಿಟಿ, ಮತ್ತು ಶಾಂತಿಭಂಗ ಕಾರಣಗಳನ್ನು ಅಡಗಿಸಲು ಸಿದ್ಧವಾಗಿರುವ ಅಂತರರಾಷ್ಟ್ರೀಯ ಸೈನ್ಯಗಳು; ತಮ್ಮನ್ನು ತಾವೇ ಆಳಿಕೊಳ್ಳದಿರುವ ಜನರನ್ನು ರಕ್ಷಿಸುವ ಧರ್ಮದರ್ಶಿಸಮಿತಿ; ರಾಷ್ಟ್ರಗಳ ಮನಸ್ತಾಪಗಳನ್ನು ತೀರ್ಮಾನಮಾಡುವ ಅಂತರರಾಷ್ಟ್ರೀಯ ನ್ಯಾಯಾಸ್ಥಾನ; ವಿದ್ಯಾಭ್ಯಾಸ, ವಿಜ್ಞಾನ ಮತ್ತು ಸಂಸ್ಕೃತಿಯ ಮೂಲಕ ಪ್ರಪಂಚ ಬುದ್ಧಿಶಕ್ತಿ ಸಹಕಾರವನ್ನು ಮುಂದುವರಿಸಲು ರಚಿಸಿರುವ ವಿದ್ಯಾಭ್ಯಾಸ ವಿಜ್ಞಾನ ಮತ್ತು ಸಾಂಸ್ಕೃತಿಕ ಸಮಿತಿ, ಪ್ರಪಂಚದ ಉದ್ಯೋಗ ಮತ್ತು ಕ್ಷೇಮದ ಮಟ್ಟವನ್ನು ಹೆಚ್ಚಿಸಲು ಕಾರ್ಮಿಕರ ಸಂಘಗಳ ಪ್ರತಿನಿಧಿಗಳನ್ನೊಳಗೊಂಡ ಅಂತರರಾಷ್ಟ್ರೀಯ ಕಾರ್ಮಿಕಸಂಸ್ಥೆ; ವಾಣಿಜ್ಯ ವಾಯು ಸಂಚಾರದ ತೊಡಕಾದ ಸಮಸ್ಯೆಗಳನ್ನು ಪರಿಹರಿಸಲು ಯತ್ನಿಸುವ ಅಂತರರಾಷ್ಟ್ರೀಯ ಸಿವಿಲ್ ವೈಮಾನಿಕ ಸಂಸ್ಥೆ; ಪುನರ್ನಿರ್ಮಾಣ ಮತ್ತು ಅಭಿವೃದ್ಧಿ ಕೆಲಸಗಳಿಗೆ ಹಣ ಸಾಲ ಕೊಡುವ ಅಂತರರಾಷ್ಟ್ರೀಯ ಬ್ಯಾಂಕ್, ನಾಣ್ಯಚಲಾವಣೆಯನ್ನು ಸ್ಥಿಮಿತಗೊಳಿಸಲು ಸದಸ್ಯರಿಗೆ ಸಹಾಯ ಮಾಡುವ ಅಂತರರಾಷ್ಟ್ರೀಯ ಮಾನಿಟರಿ ಫಂಡ್, ಪ್ರಪಂಚದ ವೈದ್ಯಕೀಯ ಅಭಿವೃದ್ಧಿಯ ಸಮಾಚಾರ ಕೇಂದ್ರವಾದ ಪ್ರಪಂಚ ಆರೋಗ್ಯ ಸಂಸ್ಥೆ, ನಿರಾಶ್ರಿತರಿಗೆ ಸಹಾಯ ಮಾಡುವ ಅಂತರರಾಷ್ಟ್ರೀಯ ಸಂಸ್ಥೆ ಇವೆಲ್ಲವುಗಳನ್ನು ಒಟ್ಟಿಗೆ ಸೇರಿಸಿ, ಆರ್ಥಿಕ ಮತ್ತು ಸಾಮಾಜಿಕ ಯುದ್ಧವಾಗುವುದನ್ನು ತಡೆಗಟ್ಟಲು ಯತ್ನಿಸುವ ಆರ್ಥಿಕ ಮತ್ತು ಸಾಮಾಜಿಕ ಸಮಿತಿ: ಈ ಸಮಿತಿಗಳ ವಿವರಗಳನ್ನು ಓದಿದಂತೆ ಇಷ್ಟು ವಿಶದವಾಗಿ ರಚಿಸಿರುವ ಸಂಸ್ಥೆ ಶಾಂತಿಯನ್ನು ಸಾಧಿಸಲೇಬೇಕಲ್ಲವೇ ಎನ್ನಿಸುವುದು. ಒಡನೆಯೇ ಅಶಾಂತಿಯ ಪ್ರಕರಣಗಳು ಎಷ್ಟೊಂದಿವೆ ಎಂದು ಆಶ್ಚರ್ಯವೂ ಆಗುವುದು. ಪ್ರಪಂಚ ಸಂಸ್ಥೆ ಆಲೋಚಿಸುವ ವಿವರಗಳು ಪ್ರತಿ ವ್ಯಕ್ತಿಗೂ ಸುತ್ತುಗಟ್ಟಿಕೊಂಡಿರುವವಾಗಿರುತ್ತವೆ. 'ಸರ್ವೇ ಜನಾಃ ಸುಖಿನೋ ಭವಂತು' ಎಂಬ ಮಂತ್ರ ನಮಗೆ ಪರಿಚಿತವಾದದ್ದು. ಈ ಮಂತ್ರವನ್ನು ಹೇಳುತ್ತಹೇಳುತ್ತಲೆ ಈ ಐವತ್ತು ವರ್ಷಗಳಲ್ಲಿ ಇಡೀ ಭೂಗೋಳವನ್ನಾವರಿಸಿದ ಎರಡು ಮಹಾ ಯುದ್ಧಗಳಾದವು. ಮಂತ್ರಾಲೋಚನೆಯಿಂದ ಯುದ್ಧವಾಗದಂತೆ ನೋಡಿಕೊಳ್ಳಬೇಕೆಂದು ಹೊರಟಿರುವ ವಿಶ್ವಸಂಸ್ಥೆಯ ವಿವರ ಎಲ್ಲರೂ ತಿಳಿದುಕೊಳ್ಳಬೇಕಾದದ್ದು.

ವಿಶ್ವಸಂಸ್ಥೆ ಮತ್ತು ಯುವಕರು—ಮೂಲ ಲೇಖಕಿಯರು, ಎಲಿನಾರ್ ರೂಸ್‌ವೆಲ್ಟ್; ಸಹಾಯಕ ಪ್ರಕಾಶಕರು: ಹೆಲೆನ್ ಫೆರಿಸ್. ಕನ್ನಡದ ಪುಸ್ತಕದ ಪ್ರಕಟನಕಾರರು ಹಿಗ್ಗಿನ್ ಬಾಥಮ್ಸ್, ಲಿಮಿಟೆಡ್, ಪುಟ ೧೯೪.

ಈ ಪುಸ್ತಕವನ್ನು ಬರೆದವರಲ್ಲಿ ಕರ್ತವ್ಯದ ಜೊತೆಗೆ ಅಂತಃಕರಣವೆಂಬುದು ತುಂಬಿತುಳುಕುತ್ತಿರುವುದು ವ್ಯಕ್ತಪಡುತ್ತದೆ. ಮಾನವನ ಹಕ್ಕು ಬಾಧ್ಯತೆಗಳ ವಿಷಯ ಎಷ್ಟು ಮಹತ್ವದ್ದು ಎಂಬುದನ್ನು ಕತೆಗಳ ಕಡೆಯಲ್ಲಿ ಒಂದು ಸೂಚನೆಯಾಗಿ ಸೇರಿಸಿದ್ದರೂ ಗುರಿತಪ್ಪದಂತೆ ಮನಗಾಣಿಸಿದ್ದಾರೆ. ಪುಸ್ತಕದ ಮುಖ್ಯ ವಿಚಾರ ವಿಶ್ವಸಂಸ್ಥೆಯ ಬೇರೆಬೇರೆ ಭಾಗಗಳು ಪ್ರಪಂಚದ ಯುವಕರಿಗಾಗಿ ಹೇಗೆ ಕೆಲಸ ಮಾಡುತ್ತಿವೆ ಎಂಬುದು. ತೀವ್ರವಾಗಿ ಯುದ್ಧ ನಡೆದ ದೇಶಗಳಲ್ಲಿ ತಂದೆತಾಯಿಗಳೊಂದು ಕಡೆ ಮಕ್ಕಳುಗಳೊಂದು ಕಡೆ ಆಗಿಹೋಗುವ ಪ್ರಸಂಗಗಳು ಬೇಕಾದಹಾಗೆ ಉಂಟಾದವು. ಇಂತಹ ಮಕ್ಕಳುಗಳನ್ನು ಹುಡುಕಿ ತಾಯಂದಿರಬಳಿಗೆ ಸೇರಿಸುವ ಕೆಲಸ ವಿಶ್ವಸಂಸ್ಥೆಯ ಏರ್ಪಾಡಿನಲ್ಲಿ ಒಂದು ಆಯಿತು. ಸ್ಥಾನಪಲ್ಲಟವಾದ ಜನಗಳಲ್ಲಿ ಯುವಕರನ್ನು ನೋಡಿಕೊಳ್ಳುವುದು ಒಂದುಬಗೆಯದಾದರೆ ತಮ್ಮ ಪ್ರಾಂತದಲ್ಲೇ ಉಳಿದರೂ ಯುದ್ಧದಿಂದ ಕಂಗೆಟ್ಟುಹೋಗಿದ್ದ ಹುಡುಗರು ಮಕ್ಕಳನ್ನು ನೋಡಿಕೊಳ್ಳುವುದು ಒಂದು ದೊಡ್ಡ ಕಾರ್ಯಕ್ರಮವಾಯಿತು. ಪ್ರತಿದೇಶದಲ್ಲಿಯೂ ಹರಡಿದ ಕ್ಷಯ ಮೊದಲಾದ ರೋಗಗಳನ್ನು ತಡೆಯುವ ಕಾರ್ಯಕ್ರಮಗಳು ಇನ್ನೂ ನಡೆಯುತ್ತಿವೆ. ತುರ್ತು ಕಾರ್ಯಕ್ರಮವಾಗಿ ಅಲ್ಲಲ್ಲಿ ಅನ್ನ, ಹಾಲು, ನೀರುಗಳನ್ನು ಒದಗಿಸುವುದು, ಮುಂದಿನ ಸಮೃದ್ಧಿಗಾಗಿ ಒಂದು ಉತ್ಸಾಹವನ್ನು ಕಾರ್ಯರೂಪದಲ್ಲಿ ಬೆಳೆಸುವುದು, ಇದು ಪುನರ್‌ರಚನೆಯ ಒಂದು ಮುಖ್ಯಭಾಗ. ಮುರಿದ ಪಾಠಶಾಲೆಗಳನ್ನು ಮತ್ತೆ ಕಟ್ಟುವುದು, ಅನಕ್ಷರತೆಯನ್ನು ಹೋಗಲಾಡಿಸಿ ತಿಳಿವಳಿಕೆಯನ್ನು ಹರಡುವುದು ಇನ್ನೊಂದು ಮುಖ್ಯಭಾಗ. ಹೀಗೆ ವಿಶ್ವಸಂಸ್ಥೆಯಿಂದ ಯುವಕರಿಗಾಗಿ ಎಲ್ಲ ಕಡೆಗಳಲ್ಲಿ ನಡೆಯುತ್ತಿರುವ ಕೆಲಸಗಳನ್ನು ಉದಾಹರಣೆಗಳ ಮೂಲಕ ಕಣ್ಣಿಗೆ ಕಟ್ಟುವಂತೆ ವಿವರಿಸಿದೆ.

ದಿಟ್ಟತನದ ಹೊಸಯೋಜನೆ—ಮೂಲ ಲೇಖಕರು ವಿಲರ್ ಆರ್ ಎಪ್ಪಿ. ಪ್ರಕಟನಕಾರರು: ಹಿಗ್ಗಿನ್ ಬಾಥಮ್ಸ್ ಲಿಮಿಟೆಡ್, ಪುಟ ೨೬೩.

ಪ್ರಪಂಚದ ಪ್ರತಿ ದೇಶವು ತನ್ನ ಜನದ ಜೀವನದ ಮಟ್ಟ ಹೆಚ್ಚುವುದಕ್ಕೆ, ತನ್ನ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳುವುದಕ್ಕೆ ದೊಡ್ಡದೊಡ್ಡ ಯೋಜನೆಗಳನ್ನು ಹಾಕಿಕೊಂಡಿದೆ. ಯೋಜನೆಗಳ ಮುಖ್ಯ ಗುರಿ ಉಪವಾಸದ ಕೊರತೆ ಹೋಗಬೇಕು. ಪ್ರತಿ ವ್ಯಕ್ತಿಗೆ ಆಗುವ ಕಿರುಕುಳಗಳ ಮೊತ್ತ ಬೃಹದಾಕಾರವನ್ನು ತಾಳಿದರೆ ಯುದ್ಧಪರಿಸ್ಥಿತಿಯನ್ನು ತಪ್ಪಿಸಬೇಕಾದದ್ದು ಎಲ್ಲ ದೇಶಗಳಲ್ಲಿ ಬಂಡವಾಳವನ್ನು ಹಾಕಬಲ್ಲ ಅಮೇರಿಕಾದವರ ಕರ್ತವ್ಯ. ಸ್ವಸಂಪೂರ್ಣತೆ ಅಮೇರಿಕದವರಿಗಾದರೂ ಸಾಧಿಸುವ ವಿಷಯ ಅಲ್ಲ. ಅವರ ಆವಶ್ಯಕತೆಗಳು ಪ್ರಪಂಚದ ನಾನಾ ಕಡೆಗಳಿಂದ ತುಂಬಿ ಬರಬೇಕು. ತಾವು ಸುಗಮವಾಗಿ ಬದುಕುವುದಕ್ಕಾದರೂ ಅಮೇರಿಕದವರು ಇತರ ದೇಶದವರಿಗೆ ಸಹಾಯ ಮಾಡಬೇಕು. ತಾವು ಹಾಕಿದ ಬಂಡವಾಳ ನೀರಿನಲ್ಲಿ ಹೋಮ ಮಾಡಿದಂತಾಗದಷ್ಟೆ ಎಂಬುದು ಅಮೇರಿಕದ ಬಂಡವಾಳಗಾರರು ಸಹಜವಾಗಿ ಕೇಳುವ ಪ್ರಶ್ನೆ. ಆಯಾ ದೇಶದ ಜನ ತಾವುತಾವೇ ಮೇಲಕ್ಕೆ ಬರುವ ಹಾಗೆ ಮಾಡುವುದಕ್ಕೂ ಅವರಿಗೆ ಸಹಾಯ ನೀಡಬೇಕು. ಹಾಗೆ ಅವರು ಕೈಗಾರಿಕೆಗಳ ಕಡೆಗೆ ಮನಸ್ಸು ತಿರುಗಿಸುವ ಮಟ್ಟಕ್ಕೆ ಬರದೇ ಹೋದರೆ ಅವರಲ್ಲಿ ಕೊಳ್ಳುವ ಶಕ್ತಿ ವೃದ್ಧಿಯಾಗುವುದಿಲ್ಲ. ಆ ಕೊಳ್ಳುವ ಶಕ್ತಿ ಹೆಚ್ಚದೆ ಅವರ ಮನಸ್ಸು ಇನ್ನೂ ದೊಡ್ಡ ಯೋಜನೆಗಳ ಕಡೆಗೆ ತಿರುಗುವುದಿಲ್ಲ. ತಿರುಗುವುದರೊಳಗೆ ಸ್ಥಿತಿ ಹೇಗೆಹೇಗೆ ಹದಗೆಡಬಹುದು ಏನೇನು ಅನಾಹುತ ಆಗಬಹುದು! ಅಮೇರಿಕದ ಸಹಾಯ ಆವಶ್ಯಕ ಎಂದು ತೋರಿಬರುವ ಈಗಿನ ಪರಿಸ್ಥಿತಿಯನ್ನು ಗಣನೆಗೆ ತಂದುಕೊಂಡು ಒಳ್ಳೆಯ ನೆರೆಯ ತತ್ತ್ವವನ್ನು ಅಮೇರಿಕ ಏಕೆ ಬೆಳೆಸಬಾರದು? ಇದರಿಂದ ಯುದ್ಧಭೀತಿ ಕಡಮೆಯಾಗುವುದಿಲ್ಲವೇ? ಇದೇ ವಿಶ್ವಸಂಸ್ಥೆಯ ಗುರಿ ಅಲ್ಲವೇ? ಎಂಬುದು ಪುಸ್ತಕದ ವಿಚಾರಸರಣಿ. ಗ್ರಂಥವನ್ನು ಓದಿ ಸಂಶಯಗಳೇನಾದರೂ ಬರುವಂತೆ ಇದ್ದರೆ 'ಗ್ರಂಥದ ಕೆಲವು ಭಾಗಗಳು ನೈತಿಕ ಜೀವನಕ್ಕಿಂತ ಆರ್ಥಿಕ ಜೀವನಕ್ಕೆ ಪ್ರಾಶಸ್ತ್ಯ ಕೊಟ್ಟಂತೆ ತೋರಬಹುದು; ಬೃಹದಾಕಾರವನ್ನೂ ಸ್ವಾತಂತ್ರ್ಯವನ್ನೂ ಒಂದೇ ಎಂದು ಭಾವಿಸಿದಂತೆ ಕಾಣಬಹುದು; ಬೃಹದಾಕಾರವನ್ನೂ ಸ್ವಾತಂತ್ರವನ್ನೂ ಒಂದೇ ಎಂದು ಭಾವಿಸಿದಂತೆ ಕಾಣಬಹುದು; ಐಶ್ವರ್ಯವೇ ಸುಖವೆಂಬ ಧ್ವನಿ ಬರಬಹುದು; ಇತರ ಜನಾಂಗಗಳ ಸಂಸ್ಕೃತಿ, ಕಲೆ, ಆಸಕ್ತಿ—ಇವುಗಳನ್ನು ಅಲ್ಲಗಳೆದಂತೆ ತೋರಬಹುದು. ಇವು ಗ್ರಂಥಕರ್ತನ ಆಶಯಕ್ಕೆ ವಿರೋಧವಾದವು' ಎಂದು ಮೊದಲೇ ಹೇಳಿ

ಬಿಟ್ಟಿದ್ದಾರೆ. 'ಆಫ್ರಿಕಾ ಅಷ್ಟೊಂದು ಕಗ್ಗತ್ತಲೆಯ ಖಂಡವಲ್ಲ'; 'ಸಹರಾದಲ್ಲಿ ತೋಟಗಳು'; 'ಏಷ್ಯವನ್ನು ಏಷ್ಯದ ಜನರೇ ಉದ್ಧಾರ ಮಾಡಿಕೊಳ್ಳಬೇಕು'; 'ಸ್ವತಂತ್ರ ಯೂರೋಪ್ ದೇಹವಿಲ್ಲದ ತಲೆ, ಗುಲಾಮಗಿರಿಯಲ್ಲಿರುವ ಯೂರೋಪ್ ತಲೆಯಿಲ್ಲದುದೇ: ಹೀಗೆ ಒಂದು ಕವನದ ಧಾಟಿಯ ಮಾತುಗಳಿಂದ ಪುಸ್ತಕದ ತರ್ಕ ಉದ್ದಕ್ಕೂ ಧ್ವನಿಪೂರ್ಣವಾಗಿದೆ. ಪುಸ್ತಕ ಪ್ರತಿಪಾದನೆ ಮಾಡಲು ಹೊರಟಿರುವ ಅಂಶಗಳಿಗೆ ತಕ್ಕಂತೆ 'ಕಮ್ಯೂನಿಸಂ', 'ಖಾಸಗೀ ಬಂಡವಾಳ,' 'ಸರ್ಕಾರೀ ಪ್ರಭಾವ,' ಮುಂತಾದವುಗಳ ಚರ್ಚೆ ಬೇಕಾದಷ್ಟು ಇದೆ. ಅದರಲ್ಲಿ ಕೊಟ್ಟಿರುವ ವಿವರಗಳಿಗಾಗಿ ಆಗತ್ಯ ಓದಬೇಕಾದ ಪುಸ್ತಕ.

**ರೂಸ್‌ವೆಲ್ಟ್, ಹಿನ್ನೆನಪು**—ಮೂಲ ಲೇಖಕರು ಜಾನ್ ಗಂಥರ್. ಹಿಗ್ಗಿನ್ ಬಾಥಮ್ಸ್ ಲಿಮಿಟೆಡ್ ಅವರ ಪ್ರಕಟನೆ. ಪುಟ. ೨೭೧.

ಈ ಗ್ರಂಥವನ್ನು ಬರೆದಿರುವವರು 'ಇನ್‌ಸೈಡ್ ಏಷಿಯ' 'ಇನ್‌ಸೈಡ್ ಯು. ಎಸ್. ಎ', ವೊದಲಾದುವನ್ನು ಬರೆದು ಪ್ರಸಿದ್ಧರಾದವರು. ಈ ಪುಸ್ತಕದಲ್ಲಿ ರೂಸ್‌ವೆಲ್ಟ್ ಮಹಾಶಯನ ಮಹತ್ವವನ್ನು ಸೂಕ್ಷ್ಮದೃಷ್ಟಿಯಿಂದ ವಿಮರ್ಶಿಸಿದ್ದಾರೆ. ಅಮೇರಿಕಾ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷ ಪದವಿಗೇರಿದ ಮಹನೀಯನೊಬ್ಬನ ವ್ಯಕ್ತಿ ಪರಿಚಯ ಎಂದರೇ ಎಷ್ಟೋ ಸ್ವಾರಸ್ಯವಾದ ವಿಷಯ. ಅದರಲ್ಲಿಯೂ ಶ್ರೀಮಂತಿಕೆಯಲ್ಲಿ ಜನಿಸಿ ದೀನರಿಗಾಗಿ ದುಡಿದವನು, ಯುದ್ಧಕಾಲದಲ್ಲಿ ಅಧ್ಯಕ್ಷನಾಗಿದ್ದು ಅದನ್ನು ಗೆಲ್ಲಲು ಬೇಕಾದ ಪ್ರಯತ್ನಗಳನ್ನು ನಡೆಸಿದವನು, ಯುದ್ಧಾನಂತರದ ಶಾಂತಿಯನ್ನು ಕುರಿತು ಆಲೋಚಿಸಿದವನು ಎಂದು ರೂಸ್‌ವೆಲ್ಟ್ ಮಹಾಶಯನ ಪ್ರಸಿದ್ಧಿ. 'ಟೆನೆಸಿವ್ಯಾಲಿ ಅಥಾರಿಟಿ'; 'ನಾಲ್ಕು ಸ್ವತಂತ್ರಗಳ ಘೋಷಣೆ'; 'ಅಟ್ಲಾಂಟಿಕ್ ಘೋಷಣೆ'; ವೊದಲಾದ ಯೋಜನೆ ವಿವರಗಳೊಡನೆ ರೂಸ್‌ವೆಲ್ಟ್‌ನ ಹೆಸರು ಹೆಣೆದುಕೊಂಡಿದೆ. ಗ್ರಂಥಕರ್ತರು ತಮ್ಮ ನಾಯಕನ ಗುಣಗಳನ್ನು ಮೆಚ್ಚಿ 'ಎಲ್ಲಕ್ಕಿಂತಲೂ ಅಧಿಕವಾಗಿ ರೂಸ್‌ವೆಲ್ಟನು ಒಬ್ಬ ಅಧ್ಯಾಪಕ ......... ಅಧ್ಯಕ್ಷನ ಕೆಲಸವನ್ನು ವಿಶಾಲಪಡಿಸಿ ಶ್ವೇತಭವನವನ್ನು ಅಧ್ಯಾಪಕನ ಸ್ಥಾನವನ್ನಾಗಿ ಮಾಡಿ ಸರಕಾರ ಕಾರ್ಯಗಳನ್ನು ಪ್ರಜೆಗಳು ತಮ್ಮ ಹಿತಕ್ಕೆ ಹೇಗೆ ಉಪಯೋಗಿಸಿಕೊಳ್ಳಬಹುದೆಂದು ತೋರಿಸಿಕೊಟ್ಟಿದ್ದಲ್ಲದೆ ಪ್ರಜೆಗಳೆಲ್ಲರೂ ರಾಜ್ಯಾಡಳಿತ ಕ್ರಮಗಳನ್ನು ತಿಳಿದುಕೊಳ್ಳಲು ಅವಕಾಶವನ್ನು ಕಲ್ಪಿಸಿ ಪ್ರತಿಯೊಬ್ಬ ಪ್ರಜೆಗೂ ರಾಜಕೀಯದಲ್ಲಿ ಅಭಿರುಚಿ ಹುಟ್ಟುವಂತೆ ಮಾಡಿದನು.... ಹೀಗೆ ಮಾಡಿದುದರ ಒಂದು ಪರಿಣಾಮವೆಂದರೆ, ಅಧ್ಯಕ್ಷನು ದಿವಂಗತನಾದರೂ ಪ್ರಜೆಗಳ ಹೃದಯದಲ್ಲಿ ಜೀವಂತನಾಗಿದ್ದಾನೆ. ಕೋಟ್ಯಂತರ ಅಮೇರಿಕನ್ನರು ತಮ್ಮ ಜೀವಮಾನ ಕಾಲವೂ ರೂಸ್‌ವೆಲ್ಟಿಗೇ ತಮ್ಮ ಓಟುಗಳನ್ನು ಕೊಡುತ್ತಲಿರುತ್ತಾರೆ' ಎಂದು ಪುಸ್ತಕವನ್ನು ಮುಕ್ತಾಯಗೊಳಿಸಿರುತ್ತಾರೆ. ಇಲ್ಲಿ ಕೊಟ್ಟಿರುವ ಜೀವನದ ಕಥೆಯನ್ನು ಚರಿತ್ರೆಯ ಒಂದು ಪಾರ್ಶ್ವ ದೃಶ್ಯ ಎಂದು ಕರೆದಿದ್ದಾರೆ. ಚರಿತ್ರೆ ಮಾನವನನ್ನು ಸೃಷ್ಟಿಸುತ್ತದೆಯೋ ಮಾನವನು ಚರಿತ್ರೆಯನ್ನು ಸೃಷ್ಟಿಸುತ್ತಾನೆಯೋ ಎಂಬುದನ್ನು ವಿಮರ್ಶಿಸಲು ಪುಸ್ತಕವನ್ನು ಓದಬೇಕು.

**ಮಹಾಚುನಾವಣೆ**—ಐದು ಲಾವಣಿಗಳು ಲೇಖಕರು: ಶ್ರೀ ಡಿ. ವಿ. ಜಿ. ಅವರು ಪ್ರಕಟನಕಾರರು: ಕಾವ್ಯಾಲಯ, ಮೈಸೂರು. ಪುಟ ೧೬. ಬೆಲೆ ೦-೪-೦.

ಪುಸ್ತಕದಲ್ಲಿ ಐದು ಲಾವಣಿಗಳಿವೆ. ವೊದಲನೆಯ ಲಾವಣಿ ಮಹಾಚುನಾವಣೆಗೆ ಯಾವ ಹುಯಿಲಿನಿಂದ ನಾಟಕ ನಡೆದಿತ್ತು ಎಂಬುದನ್ನು ಹೇಳುತ್ತದೆ. ಜನನಾಯಕನೆಂದು ವೇಷ ಹಾಕಿದವನನ್ನು ಇದ್ದುದನ್ನು ಇದ್ದಹಾಗೆ ಹೇಳುವ ಮಂದಿ ಯಾವ ರೀತಿ ಹಿಯ್ಯಾಳಿಸಬಹುದಿತ್ತೆಂಬುದನ್ನು ಎರಡನೆಯ ಲಾವಣಿ ತೋರಿಸುತ್ತದೆ. ಮತ ಕೇಳುವವರೊಬ್ಬೊಬ್ಬರೂ ಮಾಡುತ್ತಿದ್ದ ವಾಗ್ದಾನವನ್ನು ಹಂಗಿಸುವ ಲಾವಣಿ ಮೂರನೆಯದು. ಫಲಿತಾಂಶವೆಲ್ಲ ಅಂಗೈಯ ವೈಕುಂಠವಾಯಿತೆಂದು ಹೇಳುವುದು ನಾಲ್ಕನೆಯ ಲಾವಣಿ. ಚುನಾವಣೆಯ ಗೊಂದಲಕ್ಕೆ ಸಿಕ್ಕಿದ ಸರಸ್ವತಿಯ ಮೊರೆ ಐದನೆಯ ಲಾವಣಿ.

ಆ ಚಿತ್ರಗಳ ಕಲ್ಪನೆ, ಎಷ್ಟು ಸುಲಭಮಾಡುವುದಕ್ಕೆ ಹೋದರೂ ಬಂದು ಸೇರಿಕೊಳ್ಳುವ ವ್ಯಾಕರಣದ ರೀತಿ ಮತ್ತು ಭಾಷೆಯ ಆಯ್ಕೆ ಕೃತಿ ಅರಿತು ನುರಿತ ಕವಿಪಂಡಿತರದೆಂದು ತಟ್ಟನೆ ತೋರಿಸಿಕೂಡುತ್ತವೆ. ಆಗ ಕಂಡುದನ್ನು ಆಗ ಹೇಳುವ ವಾಸ್ತವತೆ ಸಾಹಿತ್ಯದಲ್ಲಿ ಮೂಡಬೇಕು ಎನ್ನುವವರಿಗೆ ಮೂಡದೆ ಏನು ಆದೀತು ಎಂಬ ಉತ್ತರ ಈ ಲಾವಣಿಗಳಲ್ಲಿ ಸೊಗಸಾಗಿ




ಕಾಣಬರುತ್ತದೆ. ಮಹಾಚುನಾವಣೆ ಸಮಯದಲ್ಲಿ ಜನರ ಮನಸ್ಸಿನಲ್ಲಿ ಬಂದ ಭಾವಗಳನ್ನು ಹಾಡಾಗಿ ಹರಿಸಿದ್ದಾರೆ ಲೇಖಕರು.

ಯಾವ ಗುರುತಿಗೆ ಹೇಗೋ ಮತ ಕೊಟ್ಟ ಬೆಪ್ಪನ್ನು ಹೊರಗೆಡಹುವ ಒಂದು ಹಾಸ್ಯದ ರಸದ ಜೊತೆಗೇ ಆದ ಮೋಸಕ್ಕೆ ಹೊಟ್ಟೆ ಕಿವುಚಿಕೊಳ್ಳುವ ನೋವಿನ ದನಿಯೂ ಕೂಡಿ ಬರುವುದು ಕಾಣುತ್ತದೆ. ಈ ಆಟವನ್ನು ನೋಡಿ ದೇವತೆಗಳು ನಕ್ಕಿರಬಹುದು. ಎಲ್ಲದರ ನಡುವೆ ಕವನದ ಒಂದು ಮಹತ್ಪ್ರಯೋಜನ ಎದ್ದು ಕಾಣುತ್ತಿದೆ. ಜನಗಳಿಗೆ ಮೋಸಮಾಡಿ ನೀವು ಬದುಕಲಾರಿರಿ ಎಂದು ಜನನಾಯಕರಿಗೆ ಎಚ್ಚರಿಸುವ ಧ್ವನಿಯೇ ಅದು.

ರಾಜ್ಯತಂತ್ರವನ್ನು ಈ ಲಾವಣಿಯ ರೂಪದಲ್ಲಿ ಕೊಟ್ಟಿರುವುದರಿಂದ ಜನ ಇದನ್ನು ಓದಿಯೂ ಓದುತ್ತಾರೆ ಎನ್ನಬಹುದು. "ಕಲಿಯಿತೇಂ ಜನತೆಯಂಗ್ರೈಯ ವೈಕುಂಠದಿಂ ರಾಜ್ಯಪಾಠವನು?" ಎಂದು ಓದಿದೊಡನೆ ಕಲಿಯೋಣ ಎಂಬ ಹಂಬಲಾದರೂ ಬಂದೇಬಂದೀತು. ಹಾಗೆ ಜನಕ್ಕೆ ಪಾಠ ಕಲಿಸುವ ಲಾವಣಿ ಕೆಲವು ಕಡೆ ಇನ್ನು ಸ್ವಲ್ಪ ಸುಲಭ ಭಾಷೆಯಲ್ಲಿ ಬರಬಾರದಿತ್ತೇ? ಎನ್ನಿಸಬಹುದು. ಆದರೆ ನಿಂತು ನೋಡಿದರೆ ಇರುವ ಹಾಗೆಯೇ ಲಾವಣಿಯಲ್ಲಿ ಅವಶ್ಯಕವಾದ ಒಂದು ಧ್ವನಿ ಸಾಧಿಸಿದೆ ಎಂದು ವ್ಯಕ್ತವಾಗುತ್ತದೆ. ಒಟ್ಟಿನಲ್ಲಿ ಚುನಾವಣೆಯ ಕೊರಕಲು ದಾರಿಗೆ ಸ್ವಲ್ಪ ದೀಪ ಬಿಟ್ಟು ಬೆಳಕು ತೋರಿದ ಹಾಗಿದೆ ಈ ಲಾವಣಿಗಳಿಂದ.

'ವೀಣಾ' ಟಿ. ಎಸ್. ಮಹಾದೇವಯ್ಯ ವಿರಚಿತ. ಪುಟಗಳು ೩೮. ಬೆಲೆ: ೦-೮-೦ ಅಣೆ.

ಭಾವಗೀತೆಗಳ ಸಂಕಲನ. "ಕವಿ ರವೀಂದ್ರರಿಂದ", "ಶ್ರೀ ರಾಮಕೃಷ್ಣರ ಗೀತೆಯೊಂದು" ಹೀಗೆ ಒಂದೆರಡು ಪದ್ಯಗಳಮೇಲೆ ಕಾಣಿಸಿರುವ ಗುರುತುಗಳಿಂದ ಬರಹಗಾರರ ಒಲವು ಯಾವ ಕಡೆಗೆ ಇದೆ ಎಂಬುದು ತಿಳಿಯುತ್ತದೆ. ಹಾಡುಗಳಲ್ಲಿ ಭಾವ, ಬಯಕೆಗಳು ಕಾಣುತ್ತವೆ. ಕಾವು, ಆವೇಶ ಸ್ವಲ್ಪ ಕಡಮೆ. ಬಹುಶಃ ಕವನಗಳ ಸೊಗಸು ಇರುವುದು ಅವುಗಳ ಮಿದುತನದಲ್ಲಿ ಎಂದರೂ, ಆದೀತು. ಬರಹಗಾರರು 'ಏನೋ ಅಷ್ಟು ದೊಡ್ಡಮಟ್ಟದಲ್ಲಿಲ್ಲದಿದ್ದರೂ' ಎನ್ನುತ್ತ ತಮ್ಮ ಕವನಗಳ ಧ್ವನಿಪೂರ್ಣವಾದ ಮಿಮರ್ಶೆಯನ್ನು ತಾವೇ ಮಾಡಿಕೊಂಡು, ಓದುಗರನ್ನು ಒಲಿಸಿಕೊಳ್ಳುತ್ತಾರೆ. ಮಾತು ಸರಸವಾಗಿ ಅಡಿಯಿಡುವ ಪ್ರಯತ್ನ ಮಾಡಿದೆ ಎಂದು ಧಾರಾಳವಾಗಿ ಹೇಳಬಹುದು.

—ಎಂ. ವಾಸುದೇವಮೂರ್ತಿ

ದುಂಬಿ (ಕವನಸಂಗ್ರಹ) ಬರೆದವರು: ಆಸ್ಥಾನವಿದ್ವಾನ್ ಪಂಡಿತರತ್ನಂ ಕೀರ್ತನಾಚಾರ್ಯ ಬಿ. ಶಿವಮೂರ್ತಿಶಾಸ್ತ್ರಿ ಪ್ರಕಾಶಕರು ಶರಣಸಾಹಿತ್ಯ ಗ್ರಂಥಮಾಲಾ-೧೩; ಪುಟ ಕ್ರೌನ್ ಆ. ೯೫; ಬೆಲೆ ರೂ. ೧.

ಶರಣಸಾಹಿತ್ಯ ಗ್ರಂಥ ಮಾಲೆಯ ೧೩ನೆಯ ಕುಸುಮವಾಗಿ 'ದುಂಬಿ' ಎಂಬ ಕವನಸಂಗ್ರಹವು ವಾಚಕರಿಗೆ ಸಮರ್ಪಿತವಾಗಿದೆ. ಶ್ರೀ ಶಿವಮೂರ್ತಿಶಾಸ್ತ್ರಿಗಳು ಈ ೨೫ ವರ್ಷಗಳಲ್ಲಿ ಅನೇಕ ಸಂದರ್ಭಗಳಲ್ಲಿ ಬರೆದ ಕವನಗಳೆಲ್ಲ ಇಲ್ಲಿ ಇವೆ. ಅನೇಕರನ್ನು ಸ್ವಾಗತಿಸಿದ, ಅನೇಕರ ಅವಸಾನಕ್ಕಾಗಿ ಮರುಗಿದ, ಅನೇಕ ಸ್ಥಳಗಳನ್ನು ನೋಡಿ ಪಟ್ಟ ಆನಂದದ ಪ್ರತಿಕೃತಿಗಳು ಇವು. ಅವರೇ ಹೇಳುವಂತೆ "ಈ ಗ್ರಂಥವು ಕೈಚಳಕವುಳ್ಳ ನಾಗರಿಕನು ಕಟ್ಟಿದ ರಾಜಬೀದಿಯ ಹೂವಿನ ಹಾರವಲ್ಲ. ಅಡವಿಯ ಆಶ್ರಮದ ವಟುವೊಬ್ಬನು ಅರಣ್ಯದಲ್ಲಿ ಸಿಕ್ಕಿದ ಹೂವುಗಳನ್ನು ಕಿತ್ತು ತಂದು ಮನಬಂದಂತೆ ಪೋಣಿಸಿದ ಅಸ್ತವ್ಯಸ್ತವಾದ ಹೂಮಾಲೆಯಂತಿದೆ ಎಂಬುದು ಇಲ್ಲಿ ಗಮನಾರ್ಹ . . ." "ಈ ಗ್ರಂಥದಲ್ಲಿ ಕೆಲವು ತಾನಾಗಿ ಹೊರಬಂದು ಕೆಲವು ಬೇಕೆಂತಲೇ ಬರೆದವು, ಕೆಲವು ನಿರ್ವಾಹವಿಲ್ಲದೆ ಬರೆದುವು" . . . . . "ಈ ಕವನ ಸಂಗ್ರಹದಲ್ಲಿ ಯಾವೊಂದು ಹಿರಿಯ ಗುಣವೂ ಓರಣವೂ ಇಲ್ಲವಾದರೂ ರಸಿಕರು ಒಮ್ಮೆ ರುಚಿ ನೋಡಲು ಅರ್ಹವಾಗಿವೆಯೆಂದು" ಅವುಗಳನ್ನು ಪ್ರಕಟಿಸಲಾಗಿದೆ. "ಕವಿ-ದುಂಬಿಗಳಿಬ್ಬರೂ ಸಮಾನ ಧರ್ಮಿಗಳು. ಇವರಿಬ್ಬರೂ ದೇಶಾಟನ ಪ್ರಿಯರು, ಸುಮನೋನುರಾಗಿಗಳು, ವಸಂತಮಾಸಪ್ರಿಯರು, ಸ್ವಚ್ಛಂದವೃತ್ತಿಯವರು". ಆದುದರಿಂದ ಈ ಗ್ರಂಥಕ್ಕೆ 'ದುಂಬಿ' ಎಂಬ ಹೆಸರಿಟ್ಟಿದೆ.

ಕವಿಗಳ ಪೂಜ್ಯ ಗುರುವರ್ಯರಾದ ಕೈ|| ಪಿ. ಆರ್. ಕಂಬಶಿವಶಾಸ್ತ್ರಿಗಳ ಆತ್ಮಕ್ಕೆ ಇದನ್ನು ಕಾಣಿಕೆಯಾಗಿ ಅರ್ಪಿಸಿದೆ.

ಶ್ರೀ|| ಶಿವಮೂರ್ತಿಶಾಸ್ತ್ರಿಗಳ ವ್ಯಕ್ತಿತ್ವವನ್ನೂ ಹಲವು ವಿಧದ ಸೇವೆಯನ್ನೂ, ಅನೇಕ ವರ್ಷಗಳಿಂದ ಚೆನ್ನಾಗಿ ಅರಿತ ಕನ್ನಡ ನಾಡಿನ ಜನರಿಗೆ ಅವರ ಲೇಖನದ ಕಲೆಯ ವಿಚಾರವಾಗಿ ಹೆಚ್ಚಿಗೆ ಹೇಳಬೇಕಾಗಿಲ್ಲ.

—ಶ್ರೀ ಜಿ. ವೆಂಕಟಸುಬ್ಬಯ್ಯ

ಶ್ರೀಕಂಠಯ್ಯ ಅಚ್ಚುಕೂಟ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨. ೧೨೦೦

Reg. No. M. 3975

Licenced to Post without Prepayment. License No.6




# ಕನ್ನಡ ಸಾಹಿತ್ಯ ಪರಿಷತ್ತು

## ಪರಿಷತ್ತಿನ ಪ್ರಕಟನೆಗಳು

| | | | | | |
|---|---|---|---|---|---|
| ೧. | ಕನ್ನಡ ಬಾವುಟ (ಮೂರನೆಯ ಮುದ್ರಣ) .... | ೨ | ೦ | ೦ |
| ೨. | ಪಂಪ ಭಾರತದ ಕಥೆ (ವಚನ) .... | ೧ | ೪ | ೦ |
| ೩. | ಪಂಪ ಭಾರತದ ನಿಘಂಟು .... .... | ೧ | ೦ | ೦ |
| ೪. | ಪಂಪ ರಾಮಾಯಣದ ಕಥೆ (ವಚನ) .... | ೦ | ೧೨ | ೦ |
| ೫. | *ಪಂಪ ರಾಮಾಯಣ (೮ನೆಯ ಆಶ್ವಾಸ) .... | ೦ | ೮ | ೦ |
| ೬. | ಪಂಪ ರಾಮಾಯಣದ ನಿಘಂಟು .... .... | ೦ | ೮ | ೦ |
| ೭. | *ತೊರವೆಯ ರಾಮಾಯಣ (ಬಾಲಕಾಂಡ ಸಂಧಿ ೧೩-೧೬) .... | ೦ | ೩ | ೯ |
| ೮. | ಸೀತಾಪರಿತ್ಯಾಗ (ಜೈಮಿನಿ ಭಾರತದಿಂದ) .... | ೦ | ೧೨ | ೬ |
| ೯. | ಜೇಮ್ಸ್ ಏಬ್ರಾಮ್ ಗಾರ್‌ಫೀಲ್ಡನ ಚರಿತ್ರೆ: ಕ್ಯಾಲಿಕೊ ಪ್ರತಿ | ೧ | ೮ | ೦ |
| | ಸಾದಾ ಪ್ರತಿ | ೧ | ೦ | ೦ |
| ೧೦. | ಜ್ಯೋತಿರ್ವಿನೋದಿನಿ .... .... | ೨ | ೦ | ೦ |
| ೧೧. | ಹರಿದಾಸರ ಕೃತಿಗಳು (ಸ್ವರಪ್ರಸ್ತಾರ ಸಹಿತ) .... | ೦ | ೧೫ | ೦ |
| ೧೨. | ಹೂಮಾಲೆ .... .... | ೦ | ೧೦ | ೦ |
| ೧೩. | ಕನ್ನಡ ನಾಡಿನ ಚರಿತ್ರೆ: ಭಾಗ ೧ (೨ನೆಯ ಮುದ್ರಣ) .... | ೧ | ೮ | ೦ |
| | ಭಾಗ ೨ .... .... | ೧ | ೧೪ | ೦ |
| | ಭಾಗ ೩ .... .... | ೧ | ೦ | ೦ |
| ೧೪. | ವಡ್ಡಾರಾಧನೆ .... .... .... | ೨ | ೮ | ೦ |
| ೧೫. | ಜೈಮಿನಿ ಭಾರತದ ಕನ್ನಡ ಗದ್ಯಾನುವಾದ (ಅಶ್ವಮೇಧಿಕ ಪರ್ವ) | ೨ | ೪ | ೦ |
| ೧೬. | ಹರಿಶ್ಚಂದ್ರನ ರಾಜ್ಯಸಮರ್ಪಣ .... .... | ೦ | ೪ | ೦ |
| ೧೭. | ಸರ್ವೋದಯ .... .... .... | ೦ | ೫ | ೦ |
| ೧೮. | ಸೋಮೇಶ್ವರ ಶತಕ .... .... .... | ೧ | ೪ | ೦ |
| ೧೯. | ಸಂಕಲನ .... .... .... | ೦ | ೧೦ | ೦ |
| ೨೦. | ಕುಮಾರವ್ಯಾಸದರ್ಶನ .... .... .... | ೦ | ೨ | ೦ |
| ೨೧. | ಕನ್ನಡದಲ್ಲಿ ಸುಧಾರಣೆಗಳು .... .... | ೦ | ೬ | ೦ |
| ೨೨. | ಅರುಂಧತಿ .... .... .... | ೦ | ೪ | ೦ |
| ೨೩. | ಚಂದ್ರಹಾಸೋಪಾಖ್ಯಾನ .... .... | ೦ | ೧೨ | ೦ |
| ೨೪ | ದೂತವಾಕ್ಯ .... .... .... | ೦ | ೪ | ೦ |
| ೨೫ | ಶಿವಶರಣರ ಕೃತಿಗಳು .... .... .... | ೨ | ೦ | ೦ |
| ೨೬. | ಹರಿದಾಸ ಸಾಹಿತ್ಯ- ಇಂಗ್ಲಿಷ್ ಉಪೋದ್ಘಾತದೊಡನೆ .... | ೧೦ | ೦ | ೦ |
| | ,, ಇಂಗ್ಲಿಷ್ ಉಪೋದ್ಘಾತವಿಲ್ಲದ ಪ್ರತಿ.... | ೮ | ೦ | ೦ |

* ಪ್ರತಿಗಳು ಮುಗಿದಿವೆ.

ಪುಸ್ತಕಗಳನ್ನು ಕೊಳ್ಳುವವರಿಗೆ ಕೆಳಗೆ ಕಂಡಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.

ರೂ. ೧೫/ ಮತ್ತು ಮೇಲ್ಪಟ್ಟು ಬೆಲೆಯ ಪುಸ್ತಕಗಳನ್ನು ಕೊಳ್ಳುವವರಿಗೆ ಸೇ. ೧೦ ರಂತೆ,
ರೂ. ೫೦/ ಮತ್ತು ಮೇಲ್ಪಟ್ಟು ಕೊಳ್ಳುವವರಿಗೆ ಸೇ. ೧೫ ರಂತೆ,
ರೂ. ೧೦೦/ ಮತ್ತು ಮೇಲ್ಪಟ್ಟು ಕೊಳ್ಳುವವರಿಗೆ ಸೇ. ೨೦ ರಂತೆ.

ಶ್ರೀಕಂಠಯ್ಯ ಅಚ್ಚುಕೂಟ-ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨. ೧,೨೦೦